# ಅಪರಂಜಿ

ಏಪ್ರಿಲ್
1992

ಯುಗಾದಿ ವಿಶೇಷಾಂಕ



ಬಿಡಿ ಪ್ರತಿ : 15 ರೂ.

# ಅಪರಂಜಿ

ಸಂಪುಟ ೯ ಏಪ್ರಿಲ್-೧೯೯೨ ಸಂಚಿಕೆ ೭

## ಯುಗಾದಿ ವಿಶೇಷಾಂಕ

ಗೌರವ ಸಲಹೆಗಾರರು:
ಶ್ರೀ ಅ.ರಾ.ಸೇ.
ಶ್ರೀ ಶೇಷಗಿರಿ
ಸಂಪಾದಕ:
ಶಿವಕುಮಾರ್

ಚಂದಾ ವಿವರ:
ಬಿಡಿ ಪ್ರತಿ:
2 ರೂ. 50 ಪೈ.

ವಾರ್ಷಿಕ ಚಂದಾ
25 ರೂ.
ಆಜೀವ ಚಂದಾ:
250 ರೂ.

ವಿಳಾಸ:
ಅಪರಂಜಿ ಕಾರ್ಯಾಲಯ
36, 6ನೆಯ ಮುಖ್ಯ ರಸ್ತೆ,
ಮಲ್ಲೇಶ್ವರಂ,
ಬೆಂಗಳೂರು-560 003.

ಕೆಲಸದ ವೇಳೆ:
ಬೆಳಗ್ಗೆ 8ರಿಂದ
10 ಗಂಟೆಯವರೆಗೆ

ಇಂದು ಆಂಗೀರಸ ಯುಗಾದಿ. ಈ ಶುಭದಿನದಂದು ಎಲ್ಲ ಅಪರಂಜಿ ಓದುಗರಿಗೆ, ಲೇಖಕ/ಲೇಖಕಿಯರಿಗೆ, ಜಾಹಿರಾತುದಾರರಿಗೆ, ಭಗವಂತನು ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಅಪರಂಜಿ ತಲೆಬಾಗಿ ಪ್ರಾರ್ಥಿಸುತ್ತಾಳೆ. ಮನಮೋಹನ ಸಿಂಗರ ದೆಸೆಯಿಂದ ಬೇವಂತೂ ಲಭಿಸಿದೆ. ಇನ್ನು ಬೆಲ್ಲ ಹೊಂದಿಸೋದು ಅಪರಂಜಿ ಬರಹಗಾರರ ಹೊಣೆ ಅಲ್ಲವೇ. ಈ ಕಾರ್ಯದಲ್ಲಿ, ಬರಹಗಳನ್ನು ಸಕಾಲಕ್ಕೆ ನೀಡಿದ ಎಲ್ಲ ಲೇಖಕ, ಲೇಖಕಿಯರನ್ನೂ ಅಪರಂಜಿ ಕೃತಜ್ಞತೆಯಿಂದ ಸ್ಮರಿಸುತ್ತಾಳೆ. ಈ ಸಂಚಿಕೆಗೆ ಹಾಸ್ಯ ಕೃಷಿ ಮಾಡಿದವರಲ್ಲಿ ಹತ್ತು ಮಂದಿ ಲೇಖಕಿಯರಿದ್ದಾರೆಂಬುದು ಅಪರಂಜಿಗೆ ಹೆಮ್ಮೆಯ ವಿಷಯ.

ಈ ಬಾರಿ ಯುಗಾದಿ ವಿಶೇಷ ಸಂಚಿಕೆಯನ್ನು ತಕ್ಕ ಮಟ್ಟಿಗೆ ದಷ್ಟಪುಷ್ಟವಾಗಿ ತರಬೇಕೆನ್ನುವ ಯೋಚನೆ ಕಳೆದ ಅಕ್ಟೋಬರಿನಲ್ಲಿ ಮೂಡಿದಾಗ, ಮೊದಲು ಕಂಡು ಬಂದ ಅಡಚಣೆಯೆಂದರೆ-ಹಣದ ಹೊಂದಾಣಿಕೆ. ಜಾಹಿರಾತುಗಳಿಂದಲೇ ಈ ಸಮಸ್ಯೆಯ ಪರಿಹಾರವೆಂದು ನಿರ್ಧರಿಸಿದ ಮೇಲೆ, ಹಲವು ಕೈಗಾರಿಕೋದ್ಯಮಿ ಮಿತ್ರರನ್ನು ಭೇಟಿಮಾಡಿದ್ದಾಯಿತು. ಯುಗಾದಿ ಸಂಚಿಕೆಗೆ ಜಾಹಿರಾತನ್ನು ನೀಡುವ ವಿಷಯ ಪ್ರಸ್ತಾಪಿಸಿದ ಕೂಡಲೇ, ಹಣ ನೀಡಲು ಮುಂದೆ ಬಂದ ಈ ವ್ಯಕ್ತಿಗಳು ಯಾ ಸಂಸ್ಥೆಗಳು ಅಪರಂಜಿಯ ಬಗ್ಗೆ ಹೆಮ್ಮೆ, ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಇವರೆಲ್ಲರಿಗೂ ಅಪರಂಜಿ ಚಿರಋಣಿ.

ಇನ್ನು ಮುದ್ರಣದ ವಿಷಯ. ಅಚ್ಚುಕಟ್ಟಾಗಿ ಆಫ್‌ಸೆಟ್ ಮುದ್ರಣದಲ್ಲಿ ಈ ಸಂಚಿಕೆಯನ್ನು ಸಿದ್ಧಪಡಿಸಿದ ಇಂಪ್ರೆಷನ್ಸ್ ಮುದ್ರಣಾಲಯದ ಶ್ರೀ ವಿ.ಆರ್. ನಾಥ್ ಹಾಗೂ ಶ್ರೀ ನರಕೇಸರಿ ಇವರುಗಳು ಅಪರಂಜಿ ಬಳಗದವರೇ ಆಗಿದ್ದು ಆತ್ಮೀಯರಾಗಿದ್ದಾರೆ. ಹಾಗಾಗಿ ಇವರಿಗೆ ವಂದನೆ ಹೇಳಿದರೆ ನಮ್ಮ ಬೆನ್ನು ನಾವೇ ತಟ್ಟಿಕೊಂಡಂತೆ. ಈ ವಿಶೇಷಾಂಕದ ಡಿ.ಟಿ.ಪಿ. ಕೆಲಸವನ್ನು ಒಮೇಗಾ ಲೇಸರ್‌ನ ರವಿ ಮತ್ತು ಆಚಾರ್ಯ ಬಹು ಶ್ರದ್ಧೆಯಿಂದ ಹಾಗೂ ಆಸಕ್ತಿಯಿಂದ ನಿರ್ವಹಿಸಿದ್ದಾರೆ. ಇವರಿಬ್ಬರಿಗೂ ಅಪರಂಜಿ ಆಭಾರಿ. ಕರಡನ್ನು ಪೂರ್ಣವಾಗಿ ಸಿದ್ಧಪಡಿಸುವ ಹೊತ್ತಿಗೆ ಇವರಿಬ್ಬರೂ ಅಪರಂಜಿ ಚಂದಾದಾರರಾಗಿ ತಾವೇ ಪರಿವರ್ತಿತರಾಗಿದ್ದು ಅಪರಂಜಿಯ ಬರಹಗಾರರು ಹೆಮ್ಮೆ ಪಡಬಹುದಾದ ಸಂಗತಿ.

ಮಾರ್ಚ್ 25ನೇ ತಾರೀಖು ಅಪರಂಜಿಗೆ ಹೃದಯ ತುಂಬಿ ಬಂದ ದಿನ. ಯುಗಾದಿ ಸಂಚಿಕೆಯ ತಯಾರಿಯ ಭರಾಟೆಯಲ್ಲಿದ್ದಾಗ ಅಂದು ಇಬ್ಬರು ಹೆಣ್ಣುಮಕ್ಕಳು ಚಂದಾ ಕಳುಹಿಸಿ, ಪತ್ರಿಕೆಯ ಬಗ್ಗೆ ತಮ್ಮ ಮೆಚ್ಚುಗೆ ಸೂಚಿಸಿ ಬರೆದಿದ್ದ ಪತ್ರ ಅಪರಂಜಿಯ ಕೈ ಸೇರಿತು. ನಾಡಿನ ಯುವ ಪೀಳಿಗೆಯ ಪ್ರತಿನಿಧಿಗಳಿಂದ ಬಂದ ಈ ಮೆಚ್ಚುಗೆ ಖಂಡಿತವಾಗಿಯೂ ಅಪರಂಜಿಗೆ ಅತ್ಯಮೂಲ್ಯ ಉಡುಗೊರೆ. ಈ ಸಂತಸವನ್ನು ಓದುಗರೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಈ ಪತ್ರವನ್ನು ಕೆಳಗೆ ಅಳವಡಿಸಿದ್ದೇವೆ. ನಮ್ಮ ನಾಡಿನಲ್ಲಿ ಇನ್ನೂ ಅನೇಕ ಮುಮ್ತಾಜ್ ಮತ್ತು ಬೆನಜೀರ್‌ಗಳು ಮುಂದೆ ಬಂದು ಕನ್ನಡದ ಹಾಸ ಪರಂಪರೆಗೆ ಒತ್ತಾಸೆಯಾಗಿ ನಿಲ್ಲಲಿ ಎಂದು ಅಪರಂಜಿ ಹಾರೈಸುತ್ತಾಳೆ.

–ಶಿವಕುಮಾರ್.

---

ಇಂದ್ರಾಳಿ. 20–3–92

Respected Sir,

ನಮಸ್ಕಾರ,

ತುಂಬಾ ~ ನಮ್ಮ ಮನೆಗೆ ಅಪರಂಜಿ ಬರುತ್ತಿದೆ. ಪ್ರತಿಸಲ ಬಂದಾಗಲೂ ನಿಮಗೆ ದುಡ್ಡು ಕಳಿಸಲು ತಂದೆಗೆ ಹೇಳುತ್ತೇವೆ. ಆದರೆ ಅವರು ಪ್ರತಿ ಸಲವೂ ಮರೆತುಬಿಡುತ್ತಾರೆ. ಈಗ ನಾನು ಮತ್ತು ನನ್ನ ತಂಗಿ ರೂ. 50/- ಕಳುಹಿಸುತ್ತಿದ್ದೇವೆ. ಇದು ಮುಗಿದ ಮೇಲೆ ಪುನಃ ಕಳುಹಿಸುತ್ತೇವೆ. ಇನ್ನು ಅಪರಂಜಿ ನಮಗೆ ಕಳುಹಿಸಿ. ಅಪ್ಪನಿಗೆ ಕಳುಹಿಸಬೇಡಿ.

'ಅಪರಂಜಿ ತುಂಬಾ ಚೆನ್ನಾಗಿ ಉಂಟು'.

ನಿಮಗೆ ಜಯವಾಗಲಿ

**ಮುಮತಾಜ್ ಬೊಳುವಾರು**
**C/o ಬೊಳುವಾರು ಮಹಮದ್ ಕುಂಞ**
**ಇಂದ್ರಾಳಿ**
**ಉಡುಪಿ – 2**

**ಮುಮತಾಜ್ ಬೊಳುವಾರು**
**ಬೆನಜೀರ್ ಬೊಳುವಾರು**

# ಈ ಸಂಚಿಕೆಯಲ್ಲಿ.....

ಉದಾರ ಮನಸ್ಸಿನಿಂದ ಉಗಾದಿ ಸಂಚಿಕೆಗೆ ಜಾಹಿರಾತುಗಳನ್ನು ನೀಡಿದ ಈ ಕೆಳಗಿನ ವ್ಯಕ್ತಿ/ಸಂಸ್ಥೆಗಳನ್ನು 'ಅಪರಂಜಿ' ಕೃತಜ್ಞತೆಯಿಂದ ನೆನೆಯುತ್ತಾಳೆ.

# ಅಪರಂಜಿ

(ತಿಳಿನಗೆಯ ಕಾರಂಜಿ)

ಸಂಪುಟ–೯ ಏಪ್ರಿಲ್'೯೩ ಸಂಚಿಕೆ–೭

## ಪ್ರಾಣೋ ನಪಿಬತೋ ವಿಚ್ಛೇತ್ಸ್ಯತ ಇತಿ -ಛಾಂದೋಗ್ಯ

ನೀರನ್ನು ಕುಡಿಯುವವನಿಗೆ ಪ್ರಾಣವು ವಿಚ್ಛೇದನವಾಗುವುದಿಲ್ಲ.

ಇದು ಉದ್ದಾಲಕನು ಶ್ವೇತಕೇತುವಿಗೆ ಹೇಳಿದ ಮಾತು. ಮನಸ್ಸು ಅನ್ನಮಯ, ಪ್ರಾಣವು ಆಪೋಮಯ, ವಾಕ್ಕು ತೇಜೋಮಯ. ಅನ್ನದ ಅತ್ಯಂತ ಸೂಕ್ಷ್ಮಧಾತುವು ಮನಸ್ಸಿನಲ್ಲಿ ಶಕ್ತಿಯನ್ನುಂಟು ಮಾಡುತ್ತದೆ. ಮನಸ್ಸಿನ ಬಲವು ಶರೀರಕ್ಕೂ ಬಲವನ್ನುಂಟು ಮಾಡುತ್ತದೆ.

ಬರೀ ನೀರನ್ನೇ ಹದಿನೈದು ದಿವಸಗಳ ವರೆಗೆ ಕುಡಿದರೂ ಪ್ರಾಣವು ಹೋಗುವುದಿಲ್ಲ. ಆದರೆ ಮನುಷ್ಯನ ಹದಿನಾರು ಕಲೆಗಳಲ್ಲಿ ಒಂದೇ ಒಂದು ಉಳಿದು, ಅವನು ತಾನರಿತ ಏನನ್ನೂ ಹೇಳಲು ತೋಚದವನಾಗುತ್ತಾನೆ.

ಲೋಕದಲ್ಲೂ ಹೀಗೆಯೇ,

ಬಹು ಹಿಂದಿನ ಕಾಲದಲ್ಲಿ ಒಳ್ಳೆಯ ಕುಡಿಯುವ ನೀರು ಸಿಕ್ಕುತ್ತಿತ್ತು. ಈಗಲಾದರೋ ಜಲಮಂಡಲಿಗಳು, ವಿದ್ಯುತ್ ಬೋರ್ಡುಗಳು, ಸಾರ್ವಜನಿಕ ಆರೋಗ್ಯ ಇಲಾಖೆ, ಪ್ರಜೆಗಳಲ್ಲಿರುವ ನೈರ್ಮಲ್ಯ ಪ್ರಜ್ಞೆಯ ಅಭಾವ, ಕೈಗಾರಿಕೆಗಳ ಪ್ರಾಬಲ್ಯ ಇತ್ಯಾದಿಗಳಿಂದ ಒಳ್ಳೆಯ ಕುಡಿಯುವ ನೀರೂ ಸಿಕ್ಕುವುದಿಲ್ಲ.

ಮನ ಮೋಹನಸಿಂಗರ ಬಜೆಟ್ ಬಂದಿದೆ. ಇದರಿಂದ ಮುನ್ನೂರರವತ್ತೈದು ದಿನವೂ ನೀರು ಕುಡಿಯುವ ಪರಿಸ್ಥಿತಿ ಒದಗಿದರೆ ಆಶ್ಚರ್ಯವೇನೂ ಇಲ್ಲ. ನೂರು ದಿನಗಳಲ್ಲಿ ಬೆಲೆ ಇಳಿಸುತ್ತೇವೆ ಎಂದು ಅಧಿಕಾರಕ್ಕೆ ಬಂದರು. ಅವರ ಮಾತಿನ ಬೆಲೆ ಇಳಿಯಿತು; ಎಷ್ಟೆಂದರೆ ಇಲ್ಲವಾಯಿತು. ನೀರು ಮಲಿನವಾಗಿದ್ದರೆ ಕಾಸಿ ಕುಡಿಯಬೇಕು. ಅದಕ್ಕೆ ಇಂಧನದ ಅಭಾವ.

ಅಪರಂಜಿ ಹತ್ತನೆಯ ವರ್ಷದ ವರೆಗೂ ನೀರು ಕುಡಿದೇ ಪ್ರಾಣಧಾರಣೆ ಮಾಡಿದ್ದಾಳೆ. ಈಗಲಾದರೂ ಸುಗ್ರಾಸ ಸಿಕ್ಕುತ್ತದೆ ಎಂದು ಆಶಿಸುತ್ತಾಳೆ ನಗುತ್ತಾ.




**ಈ ವರುಷದ ಯುಗಾದಿ, ವಿಶ್ವದಲ್ಲೆಲ್ಲ**
**ಶಾಂತಿ, ನಗುಮೊಗಗಳನ್ನು ತರಲಿ ಅಂತ ಅಪರಂಜಿ**
**ತಲೆಬಾಗಿ ಪ್ರಾರ್ಥಿಸುತ್ತಾಳೆ.**

* * *

**ಮನಮೋಹನರು ನನ್ನ ಬೆಲೆಯನ್ನಂತೂ ಕಡಿಮೆ**
**ಮಾಡುವ ಹಾಗಿಲ್ಲ ಅಂತ ಅಪರಂಜಿ ನಕ್ಕಳಂತೆ!**

* * *

ವಿಶ್ವಕಪ್‌ನಲ್ಲಿ ಭಾರತ ಗೆಲ್ಲಲಿ ಎಂದು
ದೇವಾಲಯದಲ್ಲಿ ಪ್ರಾರ್ಥನೆ.

–ಸುದ್ದಿ

**ಮನುಷ್ಯ ಪ್ರಯತ್ನ ಸಾಧ್ಯವಿಲ್ಲ ಅಂತಿರಬೇಕು!!**

* * *

ಸಿಗರೇಟು ಇನ್ನೂ ದುಬಾರಿ

–ತೆರಿಗೆ ಸುದ್ದಿ

**ಡಾಕ್ಟರುಗಳಿಗೆ ಕೆಟ್ಟ ಸುದ್ದಿ!**

* * *

ಮೋಂಬತ್ತಿಗಳಿಗೆ ಮಾರಾಟ ತೆರಿಗೆ ವಿನಾಯ್ತಿ

–ತೆರಿಗೆ ಸುದ್ದಿ

**ಕೆ.ಇ.ಬಿ. ನವರಿಗೆ ಮುನ್ಸೂಚನೆ ಇರಬಹುದು!**

* * *

"ಕನ್ನಡ ಚಳುವಳಿಯಿಂದ ಏನು ಪ್ರಯೋಜನ?"

–ಶ್ರೀ ತೇಜಸ್ವಿ

"ಕುವೆಂಪು ವಿ.ವಿ. ಪರೀಕ್ಷೆ ಮುಂದಕ್ಕೆ"

-ಸುದ್ದಿ

**ದಿನಪತ್ರಿಕೆಯಲ್ಲಿ ಒಂದರ ಕೆಳಗೊಂದು ಶೀರ್ಷಿಕೆಗಳು !**

* * *

ವಿಧಾನ ಸಭೆ ಕಲಾಪಗಳ ಪಟ್ಟಿಯಲ್ಲಿ ಕೋಲಾಹಲಕ್ಕೆ
ಅಂತ ನಿರ್ದಿಷ್ಟ ಸಮಯ ಇಡುವುದು ಸೂಕ್ತ!

* * *

ವಿಧಾನ ಸೌಧ ಸುತ್ತ ನಿಷೇದಾಜ್ಞೆ ವಿಸ್ತರಣೆ

–ಸುದ್ದಿ

**ಸೌಧದ ಒಳಗೂ ವಿಸ್ತರಣೆ ಮಾಡಿದರೆ ಒಳ್ಳೆಯದೇನೋ?**

* * *

'ಆನೆ ಯೋಜನೆ' ಈ ತಿಂಗಳಲ್ಲೇ

–ಅರಣ್ಯ ಅಧಿಕಾರಿ

**ಇದೂ ಬಿಳಿ ಆನೆ ಆಗೋಲ್ಲ ತಾನೆ?**

* * *

'ದುಷ್ಟಟಗಳಿಲ್ಲದ ವೀರಪ್ಪನ್'

–ಶೀರ್ಷಿಕೆ

**ಅವನನ್ನು ಹಿಡಿಯೋರಿಗೆ ಪರೋಕ್ಷ ಸೂಚನೆಯೋ?**

* * *

# ಕನ್ನಡಾ ಖನ್ನಡ!

–ಟಿ. ಸುನಂದಮ್ಮ

ಯುಗಾದಿ ಹಬ್ಬ ಬಂತಲ್ಲ? ಮನೆ ಧೂಳು ತೆಗೆಯಲೇಬೇಕು, ವರ್ಷಕ್ಕೆರಡುಬಾರಿಯಾದರೂ; ಯುಗಾದಿ, ದೀಪಾವಳಿ!

ಹಳೆಸೀರೆ ಉಟ್ಟು ಸೆರಗುನೆರಿಗೆ ಕಟ್ಟಿ ಉದ್ದಕೋಲು ಗಿಡ್ಡ ಪೊರಕೆಧಾರಿಯಾಗಿ ಅಡ ಉದ್ದ ಓಡಾಡುತ್ತಿದ್ದಾಗ, ಮೊಮ್ಮಗ ಓಡಿಬಂದ.

"ಅಜ್ಜೀ! ನಿಮ್ಮನ್ನ ನೋಡಕ್ಕೆ ಯಾರೋ ಬಂದಿದಾರೆ"

"ನನ್ನನ್ನೇ?... ನನ್ನನ್ನೋ ನಿಮ್ಮಪ್ಪನ್ನೋ?"

ನಿಮ್ಮನ್ನೆ ಅಜ್ಜಿ; ನನಗೇನು ಅಷ್ಟು ತಿಳಿಯಲ್ವಾ?" ಅವನ ಬುದ್ಧಿವಂತಿಕೆಯು 'ಡೀವಾಲುಯೇಷನ್'ಗೆ ಸಿಡುಕುತ್ತ ಓಡಿಹೋದ.

ಹಿಡಿದಿದ್ದ ಅಸ್ತ್ರವನ್ನು ಮೂಲೆಗಿರಿಸಿ ಹೊರಕ್ಕೆ ಹೋದೆ. ವರಾಂಡದ ಕುರ್ಚಾಸೀನರಾಗಿದ್ದ ಇಬ್ಬರು ಮಹನೀಯರು ನನ್ನ ತಲೆ ಮೇಲಿನ ಇಲ್ಲಣ ಜೇಡನ ಪೊರೆಯ ಕಿರೀಟವನ್ನು ದೃಷ್ಟಿಸುತ್ತ, ಘೋರಣೆಯಿಂದ ಕೇಳಿದರು.

"ನಿಮ್ಮಮ್ಮಾವ್ರು, ಅದೇ ಸರಸಮ್ಮೋರು...ಎಲ್ಲಮ್ಮ?"

"ನಾನೇ ಸರಸಮ್ಮ"

"!!!!...ಹೆಹೆ...ಕ್ಷಮಿಸಬೇಕು ಕಮಿಸಬೇಕು" ಎದ್ದುನಿಂತು ಕೈಮುಗಿದು ಕೂತರು. "ನಾವು 'ಖನ್ನಡ ಅಬಿಮಾನೀ ಸಂಗ'ದಿಂದ ಬಂದಿದೀವಿ. ಇವರು ಅದ್ಯಕ್ಷರು ನಾನು ಸಿಕ್ರಿಟ್ರಿ. ಮುಂದಿನ ಮಂಗಳವಾರ ನಮ್ಸಂಗದ್ದು ಮೂರನೇ ವಾರ್ಷಿಕೋಸ್ತವ. ತಮ್ಮನ್ನ...ಚೀಪ್ ಗೆಸ್ಟ್ ಆಗಿ ಕರೆಯಕೆ ಬಂದಿದೀವಿ."

ಈ ಕನ್ನಡ ಕುವರರ ಕರೆಯನ್ನು ನಿರಾಕರಿಸಬೇಕೆನ್ನುವ ಚಪಲ. ಆದರೆ, ನನ್ನನ್ನು ತಾನೇ ಕರೆಯುವವರು ಯಾರಿದ್ದಾರೆ?..... ಶಿಷ್ಟಾಚಾರಕ್ಕೆ ಚುಟುಕ ಹಾರಿಸಿದೆ, "ನಾನ್ಯಾಕಪ್ಪ? ನನಗಿಂತ ದೊಡ್ಡೋರು ಹೆಚ್ಚಿಗೆ ತಿಳಿದೋರು ಈ ಊರ್ನಲ್ಲಿ ಎಷ್ಟೋ ಜನ ಇದಾರೆ!"

"ಹೆಹೆ...ಹೌದು ತಾಯಿ, ಅದು ನಮಗೂ ಗೊತ್ತು. ಆದರೆ ಅವರೆಲ್ಲ ಯಾವ ಯಾವದೋ ಕಾರ್ಯಕ್ರಮಗಳಿಗೆ 'ಬುಕ್' ಆಗಿಬಿಟ್ಟಿದಾರಲ್ಲ?.. ದಯವಿಟು ಒಪ್ಕೊಳ್ಳಬೇಕು"

"ಅಮಾಮ್ಮ, ನೀವು ಕಂಡಿದಮಾ ಬರಣು; ನೀವೇ ಅನ್ಸಿಕಿ ಮುಗ ಅದಿತಿ ಆಗಬೇಕು"

ಈ 'ತತ್ಸಮ-ತದ್ಭವ'ದ ಕನ್ನಡಕ್ಕೆ ತಬ್ಬಿಬ್ಬಾದ ನನಗೆ ಮಹನೀಯ ಒಂದು ವಿವರಣೆ ಕೊಟ್ಟ. "ಇವ್ರು ತಮಿಳು ಮಾತಾಡೋರು. ಆದರೆ ತುಂಬ ಕನ್ನಡಾಭಿಮಾನ ಮೇಡಂ. ದೊಡ ಕಂಟ್ರಾಕ್ಟರು, ನಮ್ ಏರಿಯಾಕ್ಕೇ....ಶ್ರೀಮಂತರು!"

"ಅಮ್ಮ ಗೂಡ ಕೊಡವರೇ-ವಯಸ್ನಲ್ಲಿ...ಓಹಿ... ಸೋಬಾನೆ ಹಾಡಿದ ಮಹನೀಯ ಎರಡು.

ಸ್ಥಿತಪ್ರಜ್ಞಪತಿರಾಯ- ಅರ್ಥಾತ್ ಮೈಲಾರಯ್ಯ 'ನಿನ್ನಿಷ್ಟ'ಎಂದರು. ಮಗಸೊಸೆ ಪ್ರೋತ್ಸಾಹಿಸಿದರು, ಸಿಕ್ಕಿದ ಅವಕಾಶ ಬಿಡಬಾರದೆಂದು ಹಿತವಚನ ಹೇಳಿದರು. ಕೊಂಬು, ದೀರ್ಘ, ವಟ್ರಸುಳಿ, ಅರ್ಕಾವತ್ತುಗಳ ನೆನಪು ಮಾಡಿಕೊಂಡು ಅವರ ಸಹಾಯದಿಂದ ಆರು ಪುಟದ ಭಾಷಣ ಸಿದ್ಧಮಾಡಿಕೊಂಡೆ, ಹನ್ನೆರಡುಬಾರಿ ಓದಿಕೊಂಡೆ. 'ಸರಸಮ್ಮ''ಸರಸಮ್ಮ ಎಂದು ಹಾಳೆ ತುಂಬ ಬರೆದು ಅಭ್ಯಾಸ ಮಾಡಿಕೊಂಡೆ. ಮಗ ಹೇಳಿದನಲ್ಲ- 'ಅಮ್ಮ! ನಿನ್ನನ್ನ ಎಲ್ಲರೂ ಆಟೋಗ್ರಾಫ್ ಕೇಳ್ತಾರೆ' ಎಂದು?

ಬಂದೇ ಬಿಟ್ಟಿತು 'ಡಿ-ಡೇ'! ಸೊಸೆ ಖುದ್ದಾಗಿ ಅತ್ತೆಗೆ ಅಲಂಕಾರ ಮಾಡಿದಳು. ತನ್ನದೇ ಭಾರಿ ಜರಿಸೀರೆ ಉಡಿಸಿ ಪೆದ್ದುರುಬು ಕಟ್ಟಿ ಹಳದಿ ಶಾವಂತಿಗೆ ದಂಡೆ ಸುತ್ತಿದಳು ಕೈಗೆ ಫಾರಿನ್ ಪರ್ಫ್ಯೂಮ್ ಸವರಿ ಹೆಗಲಿಗೆ ಹ್ಯಾಂಡ್‌ಬ್ಯಾಗ್ ನೇತುಹಾಕಿ ರಿಕ್ಷ ಹತ್ತಿಸಿಯೇ ಬಿಟ್ಟಳು!

ವೇದಿಕೆಯಲ್ಲೊಂದು ಆಸನದಲ್ಲಿ ಕಣ್ಣುಮುಚ್ಚಿಕೂತಿದ್ದ ಅಳುಮೋರೆಯಾತನನ್ನು "ಇವರು ಇವತ್ತಿನ ಫಂಕ್ಷನ್ ಪ್ರಿಸಿಡೆಂಟ್ರು; ಬೋರ್ಡ್ ಚೇರ್ಮನ್ ಬಲರಾಮಯ್ಯನೋರು" ಎಂದು ಪರಿಚಯಿಸಿದರು. ಛೇರ್‌ನಲ್ಲೇ ತೂಕಡಿಸುತ್ತದ್ದ ಆತ ಕಣ್ಣುಬಿಟ್ಟ; 'ನಮಸ್ಕಾರ' ಅಂದದ್ದೇ ಮತ್ತೆ ಕಣ್ಣುಮುಚ್ಚಿದ.

ಶಾಮಿಯಾನದ ಕ್ಯಾನ್ವಾಸ್ ಹರಿಯುವಷ್ಟು ಜನ ತುಂಬಿದ್ದರು. ಈ 'ರೋತೀ ಸೂರತ್'ಗಂತೂ ಅಲ್ಲ, ನನಗಾಗಿಯೇ ಇರಬೇಕು! ಹೆಮ್ಮೆಗೆ ಬೀಗಿದಾಗ ಬಾಡಿಗೆ ನೆಕ್‌ಲೇಸ್ ಕುತ್ತಿಗೆ ಬಿಗಿಯಿತು.

"ಎಷ್ಟೊಂದು ಜನ ಬಂದಿದಾರೆ!"

"ಕೆಂಟ್ ಕುಮಾರ್ ಬರ್ತಾನಲ್ಲ?" ಅಂದದ್ದೇ ಅಂತರ್ಮುಖಿ ಆದ ಅಧ್ಯಕ್ಷ. "ಕೆಂಟ್ ಕುಮಾರ್? ಅವನ್ಯಾರು ಫರಂಗಿ ಹೆಸರಿನೋನು?"

"ಫಿಲಂ ಆಕ್ಟರು; ಕೆಂಚಯ್ಯ-ಯಂಟಮ್ಮ ದಂಪತಿಗಳ ಮಗ" ಸಿಡುಕುತ್ತ ಹೇಳಿದ ಬಲರಾಮಯ್ಯ. ಪ್ರಾರ್ಥನೆ- ಸ್ವಾಗತ- ಪರಿಚಯ- ಅತಿಥಿವಾಣಿ ಮುಗಿದು, ತನ್ನ ಸರತಿ ಬರುವವರಿಗೂ ಸಂತೆಯಲ್ಲೇ ಚಿಂತೆಯಿಲ್ಲದೆ ನಿದ್ದೆ ಮಾಡುವ ತಾಕತ್ ಪಡೆದಿರುವ ತನ್ನನ್ನು, ಮತ್ತೆ ಮತ್ತೆ ಎಬ್ಬಿಸಿದ್ದಕ್ಕೆ 'ಈಕೆ ಮುಂದಿನ ಜನ್ಮದಲ್ಲಿ ತಿಗಣೆಯಾಗಿ ಹುಟ್ಟಲಿ' ಎಂದು ಶಾಪ ಹಾಕಿರಬೇಕು!

ಸಂಗೀತ ವಿದ್ಯಾರ್ಥಿನಿಯೊಬ್ಬಳು ಸಾರ್ವಜನಿಕರೆದುರು ತನ್ನ ಪ್ರಥಮ ಪ್ರಯೋಗ ಮಾಡಿ 'ಪ್ರಾರ್ಥನೆ' ಎನ್ನುವ ಕಠಿಣ ಶಿಕ್ಷೆ ವಿಧಿಸಿದಳು. "ಜೈ ಬಾರದ

ಮಾದೆ, ಜಯಹೇ ಗರ್ನಾಟಗ ಮಾದೇ... ಏರಿಯಾದ ಶ್ರೀಮಂತ ಕಂಟ್ರಕ್ಟರ್ ಮಗಳು, ಹಾಡಲೇಬೇಕಿತ್ತಲ್ಲ? ಸಹ ಕಾರ್ಯದರ್ಶಿ ಸ್ವಾಗತ ಭಾಷಣ ಪ್ರಾರಂಭಿಸಿದ ಮೊದಲಿಗೆ ಬಲರಾಮಯ್ಯನವರ ಬಲಾಬಲಗಳ ವಿವರಣೆ; ಎಷ್ಟುಸರಿ ಎಷ್ಟು ತಪ್ಪು ಎನ್ನುವ ಅನುಮಾನಕ್ಕೆ ಆಸ್ಪದವಿಲ್ಲ. ಯಾಕೆಂದರೆ ಆ ಮೂಲದೇವರು ಸಮಾಧಿ ಸ್ಥಿತಿಯಲ್ಲಿದ್ದರು.

ನಂತರ ನನ್ನ ಸರತಿ. ''ಇವತ್ತಿನ ಈ ಮೂರನೇ ವಾರ್ಷಿಕೋತ್ಸವದ ಮುಖ್ಯ ಅತಿತಿ ಸ್ರೀಮತಿ...ಸ್ರೀಮತಿ..(ಕಾರ್ಯದರ್ಶಿ ಪಿಸುಗುಟ್ಟಿದ) ಅಂ..ಸರಸಮ್ಮನವರು ಊರಿನ ಮಯಿಳೆ, ಗಣ್ಯ ಮಯಿಳೆ, ದೊಡ್ಡ ಮಯಿಳೆ. ಈಕೆ ಅಪ್ಪಟ ಕನ್ನಡಿತಿ. ಖನ್ನಡಾ ಅಂದರೆ ಅವರಿಗೆ ಅಪಾರ ಪ್ರೇಮ. ಆದ್ದರಿಂದಲೇ ಅಪ್ಪಟ ಕನ್ನಡದ ತಿಂಡಿಗಳನ್ನು ತಯಾರಿಸುವುದರಲ್ಲಿ ಹೆತ್ತಿದಕ್ಯೆ. ಕುಚ್ಚುಕಡುಬು- ನುಚ್ಚಿನುಂಡೆ- ಗೊಜ್ಜವಲಕ್ಕಿ- ಉರಳಿಸಾರು- ಇದಕ ಬೇಳೆ...! ತಿನ್ನಬೇಕು ತಿಂಥ ಬದುಕಬೇಕು!

ತಾನು ತಿನ್ನದ ನಾನು ಮಾಡದ ಅಡಿಗೆ ತಿಂಡಿ ಪಟ್ಟಿ ಬೆಳೆಯುವುದಕ್ಕೆ ಮುಂಚೆ ಬ್ರೇಕ್ ಹಾಕಿದ ಸೆಕ್ರಿಟರಿ, ನನ್ನನ್ನು ಮಾತಾಡಬೇಕೆಂದು ಸನ್ನೆ ಮಾಡಿದ....ಉತ್ಸವ ಮೂರ್ತಿಯ ಉತ್ಸಾಹದಿಂದ ಎದ್ದುನಿಂತೆ, ಹಾಳೆ ಬಿಡಿಸಿದೆ.

''ಮಾನ್ಯ ಅಧ್ಯಕ್ಷರೇ, ಸೋದರ ಸೋದರಿಯರೇ...

ಭೂಕಂಪವಾಯ್ತೇ? ಅಥವಾ ಪೆಂಡಾಲಿಗೆ ಬೆಂಕಿ ಬಿದ್ದಿತೇ? ಜನ ಯಾಕೆ ಹೀಗೆ ಓಡ್ತಿದಾರೆ?

''ಬಂದ! ಬಂದ! ಕೆಂಟ್ ಕುಮಾರ್ ಬಂದ! ಕೆಂಟ್‌ಕುಮಾರ್‌ನಿಗೆ ಜಯವಾಗಲಿ! ಕೆಂಟೂಗೆ ಜಯ ಜಯಾ! ಕನ್ನಡ ಕಣ್ಮಣಿ ಬಾಳ್ಗೆ!''

ಜನಸಾಗರ ನಾಯಕನ ಕಾರಿನ ಕಡೆಗೆ ಧಾವಿಸಿತು. ಆ ರಭಸದಲ್ಲಿ ನಿದ್ದೆಗಣ್ಣಿನ ಛೇರ್‌ಮನ್ನನ್ನು ಛೇರ್‌ನಿಂದ ಉರುಳಿಸಿದರು. ಬೆಂಚು ಜೋಡಿಸಿದ ವೇದಿಕೆ ಅದುರಾಡಿದ ಫಲವಾಗಿ, ಭಾಷಣದ ಪುಟಗಳು ಕೆಳಗುದುರಿದುವು; ಆರು ಹಾಳೆಗಳು-ಕನ್ನಡ ಬಾವುಟಗಳು- ಗಾಳಿಯಲ್ಲಿ ಹಾರಾಡಿದುವು.

ಕಾರ್ಯಕರ್ತನೊಬ್ಬ ಹೇಗೋ ನನ್ನನ್ನೊಂದು ರಿಕ್ಷಾದೊಳಗೆ ತೂರಿಸಿ ಮನೆಗೆ ಕರೆತಂದ. ಹೀಗೆ ಹೋಗಿ ಹಾಗೆ ಬಂದ ಹೆಂಡತಿಯನ್ನು ಕಂಡು ಆಶ್ಚರ್ಯದಿಂದ ಆಚೆ ಬಂದ ಯಜಮಾನರಿಗೆ ಹೇಳಿದ, ''ಹೋಗ್ತಾ ಬರ್ತಾ ಇದೇ ಗಾಡೀನೇ ಗೊತ್ತು ಮಾಡಿದ್ದೆ ಸಾರ್, ಆಗಿನ ಬಾಡಿಗೇನೂ ಕೊಟ್ಟಿಲ್ಲ...ಹಿಹಿ... ಅಂದ.

ಮೈಲಾರಯ್ಯ ಹಣ ತೆಗೆಯುವಾಗ ಇಣುಕಿದ ನೂರರ ನೋಟಿಗೇ ಕೈ ಹಾಕಿಬಿಟ್ಟ.

''ನಾನು ಪಂಕ್ಷನ್ ಪಂಡಾಲ್‌ಗೆ ಹೋಗೋ ಈ ಟ್ರಿಪ್ಪಿನದೂ ಸೇರಿಸಿ ಅವನಿಗೆ ಕೊಟ್ಟು ಬಿಡ್ತೀನಿ. ಬಾಕೀದು... ಹೆಹೆ...ನಮ್ಮ 'ಖನ್ನಡ ಅಬಿಮಾನಿ ಸಂಗ'ಕ್ಕೆ ತಮ್ಮ ವತಿಯಿಂದ ದೇಣಿಗೆ ಬರೆದ್ಕೊಳ್ತೀನಿ ಮೇಡಂ'' ಅಂದವನ್ದೇ ವೃ(ರಿ)ಕ್ಷ ವಾಹನವಾಗಿ ಹಾರಿಹೋದ!

# ವೆಂಕು

—ಕೇಫ

"ವೆಂಕಟೇಶ ಮೂರ್ತಿಗಳು ಬಂದಿದ್ರು ಸರ್-ಪೂಜೆ ಮುಗಿಸಿಕೊಂಡು ಪುನಃ ಬರ್ತಾರಂತೆ"- ನನ್ನ ಮುಂಜಾನೆ ಕಾಫಿ ಕೊಡ್ತಾ ಶೌರಿ ಹೇಳಿದ.

"ವೆಂಕು- ಇಷ್ಟು ಬೆಳಿಗ್ಯೆ?"

ನನ್ನ ರೂಮಿನಲ್ಲಿ ಸನ್‌ಸ್ಪಾಟು ಮಂದಾಕಿನಿ ಹುಬ್ಬಿನಿಂದ ಇನ್ನೂ ಅವಳ ಬಾಯಿಗೆ ಇಳಿದಿರಲಿಲ್ಲ. ಮಂದಾಕಿನಿ ಕ್ಯಾಲೆಂಡರ್- ನನ್ನ ರೂಮಿನ ಸನ್‌ಡಯಲ್ಲು. ಅದರ ಎದುರುಗಡೆಯಿಂದ ವೆಂಟಿಲೇಟರ್ ಸನ್ ಬೀಮು ಬಂದು ಮಂದಾಕಿನಿ ಚಿನ್‌ಗೆ ಬಡಿಯೋಕೂ-ಎದುರು ಮನೆ ಕೋದಂಡಯ್ಯನ ವೈಫು ಮನೆಯಿಂದ ಹೊರಗೆ ಬಂದು ಎಂಜಲೆಲೇನ ಬೀದೀಗೆ ಬಿಸಾಕೋಕೂ ಟೈಮ್ ಸರಿಹೋಗುತ್ತೆ. ಶಿವರಾಂಪೇಟೆ ನಾಯಿಗಳೆಲ್ಲಾ ನನ್ನ-ಕೋದಂಡಯ್ಯನ ಮನೆಗಳ ಮಧ್ಯೆ ಸೇರುತ್ವೆ.

"ಹೌದು ಸರ್."

"ಕೋದಂಡಯ್ಯನ ಊಟ ಇನ್ನೂ ಮುಗಿದ ಹಾಗಿಲ್ಲ?"

"ವೆಂಕಟೇಶ ಮೂರ್ತಿಗಳು ಪ್ರತಿದಿನ ಏಳೋದು-ಕೋಟೆ ಆಂಜನೇಯನ ಗುಡಿ ಸುಪ್ರಭಾತದ ಘಂಟೆ ಶಬ್ದಕ್ಕೆ. ಆಮೇಲೆ ತಮ್ಮ ಪೂಜೆಗೆ ಬುಟ್ಟಿ ಹಿಡ್ಕೊಂಡು ಹೂ ಶೇಖರಣೆಗೆ ಹೊರಡ್ತಾರೆ. ನಿನ್ನೆ ರಾತ್ರಿ ಅವರು ಕ್ಲಾಕ್‌ಟವರ್ ಹತ್ರ ಮಲಗಿದ್ದರಂತೆ ಸರ್-

"ಸರಿ ಶೌರಿ" ಅಂದೆ.

"ಸರಿ ಸಾರ್" ಅಂತ ಶೌರಿ ಖಾಲಿ ಲೋಟ ಎತ್ಕೊಂಡು ಹೋದ.

ವೆಂಕು ಪೂಜೇ ವಿಷಯ- ನಮ್ಮ ಸಂಘದಲ್ಲಿ ಒಂದು ದೊಡ್ಡ ಜೋಕು. ಬೆಟ್ಟದ ಮೇಲೆ ಚಾಮುಂಡೇಶ್ವರಿಗೆ ಪೂಜೆ ತಪ್ಪಿಸಿದರೂ- ವೆಂಕು ತನ್ನ ದಿನನಿತ್ಯದ ಪೂಜೆ ತಪ್ಪಿಸೋಲ್ಲ. ಅವನ ಪೂಜೆಗೆ ಅವನು ಹೂ ಶೇಖರಿಸೋದೂ ಒಂದು ರೀತಿ ಡಿಸಿಪ್ಲಿನ್ನು. ಶೌರಿ ಹೇಳಿದ ಹಾಗೆ-ವೆಂಕು ಪ್ರತಿನಿತ್ಯ ಕೋಳಿ ಕೂಗೋಕೆ ಮುಂಚೆನೇ- ಆಂಜನೇಯ ಕೋಟೇಲಿ ಏಳೋ ಹೊತ್ಗೇ ಏಳ್ತಾನೆ. ತಾನು ರಾತ್ರಿ ಎಲ್ಲೇ ಮಲಗಿರ್ಲಿ-ಬುಟ್ಟಿ ಅಥ್ವಾ ಕರ್ಚೀಫ್ ಹಿಡ್ಕೊಂಡು ಹೂ ಶೇಖರಿಸೋಕೆ ಹೊರಡ್ತಾನೆ- ಆ ದಿನದ ಸರದಿ ರಸ್ತೆಗೆ ಅಂದರೆ ವಾರದ ಏಳು ದಿನಗಳಿಗೂ ಏಳು ರಸ್ತೆ ಮೆಯಿನ್ ಅಥ್ವಾ ಕ್ರಾಸ್-ಯಾ ಗಲ್ಲಿಗಳನ್ನು ಚುನಾಯಿಸಿದ್ದಾನೆ. ಹಾಗಾಗಿ ಹೊಸಕೇರಿ ಬಡಾವಣೆಯ ರಸ್ತೆ ಗೊಂದಿಗಳಲ್ಲಿ ವಾಸವಾಗಿರೋ ಎಲ್ಲಾ ಗೃಹಸ್ಥರಿಗೂ ಸರದಿ ಪ್ರಕಾರ ವೆಂಕುವಿನ ಪೂಜಾಫಲ ಸಿಕ್ಕಿದೆ.

ವೆಂಕು ನನ್ನ ಪರಮ ದೋಸ್ತುಗಳಲ್ಲಿ ಒಬ್ಬ. ನಮ್ಮ ಮೈಗಳ್ಳರ ಸಂಘದ ಹಾರ್ಡ್‌ಕೋರ್ ಸದಸ್ಯರಲ್ಲೊಬ್ಬ- ಸಂಘದ ಮೈಸೂರ ಚಾಪ್ಟರ್ ಸ್ಥಾಪಕರಲ್ಲೇ

ಒಬ್ರು. ಸಂಘದ ಸದಸ್ಯರ ಪೈಕಿ ಬಾಬು, ಷಬ್ಬೀರ್, ಬಷೀರ್, ರಾಜ, ಚಂದ್ರು, ಶೀನಿ ಬಿಟ್ರೆ- ವೆಂಕು, ಕಿಟ್ಟಿ ಟಿಪ್ಸಿ ನನಗೆ ಕ್ಲೋಸೆಸ್ಟು. ಆದರೂ ವೆಂಕೂಗೆ ಇನ್ನೊಂದು ಐಡೆಂಟಿಟಿ ಇದೆ. ಅವನು ರಾತ್ರಿ ಸಂಘದಿಂದ ತನ್ನ ಮನೆಗೆ ಸೇರೋದು ಅಪರೂಪ. ಅವನ ಫೇವರಿಟ್ ರಾತ್ರಿ ಲಾಡ್ಜಿಂಗ್ ಜಾಗಗಳು- ಟೌನ್‌ಹಾಲ್ ವರಾಂಡ- ಅಥವಾ ಕ್ಲಾಕ್‌ಟವರ್ ಅಡಿ. ಅಪರೂಪಕ್ಕೆ ನನಗೇ ಗಂಟು ಬಿದ್ದು ರಾತ್ರಿ ನಮ್ಮ ಮನೆ ಹಾಲ್‌ನಲ್ಲಿ ಮಲಗಿದ್ದು ಬೆಳಗ್ಗೆ ಹೂವಿನ ಜೊತೆ ಮನೆ ಸೇರ್ತಾನೆ. ಅವನ ಮನೆಯೋರು ತಿಳ್ಕೊಂಡಿರೋದು- ವೆಂಕು ರಾತ್ರಿ ಮನೆ ಸೇರದೇ ಹೋದ್ರೆ ಅದಕ್ಕೆ ಕಾರಣ ಅವನು ನನ್ನ ಶುಶ್ರೂಷೆ ಮಾಡ್ತ ಯಾವುದೋ ನರ್ಸಿಂಗ್ ಹೋಮ್‌ನಲ್ಲಿ ಕಳೆದಾಂತ! ಈ ವಿಷಯ ನನಗೆ ತಿಳಿದಿದ್ದು- ವೆಂಕು ತಮ್ಮ ದಾಮೋದರನಿಂದ. ಒಂದು ಮಧ್ಯಾಹ್ನ ದಾಮು ನನಗೆ ಸಿಕ್ಕಿದೋನು- "ನಿಮ್ಮ ಹೊಟ್ಟೆನೋವು ಹೇಗಿದೆ?" ಅಂತ ಕೇಳಿದ. ನಾನು ಕಕ್ಕಾಬಿಕ್ಕಿಯಾದೆ. ಸದ್ಯ ನನ್ನ ಜೊತೇಲಿ ಆಗ ಶೌರಿ ಇದ್ದ. ಅವನು ತಕ್ಷಣ- "ಈಗ ನಮ್ಮ ರಾಯರಿಗೆ ಸ್ವಲ್ಪ ವಾಸಿ- ನಿಮ್ಮಣ್ಣನವರಿಗೆ ತುಂಬಾ ಥ್ಯಾಂಕ್ಸ್ ಹೇಳಪ್ಪ"-ಅಂದಿದ್ದ. ದಾಮು ಹೊರಟುಹೋದ ಮೇಲೆ- ಶೌರಿ ನನ್ನ ಕಡೆ ತಿರುಗಿ- "ನಿಮ್ಮ ಫ್ರೆಂಡು ರಾತ್ರಿ ಮನೆ ಸೇರದೆ ಹೋದ್ರೆ-ಮೂರನೇ ದಿನ ಬೆಳಿಗ್ಗೆ ಈ ಕಾರಣ ಕೊಡ್ತಾರೆ ಸರ್"-ಅಂತ ವಿವರಿಸಿದ. ಹಿಂದಿನ ರಾತ್ರಿ ಸಂಘ ಬಿಟ್ಟಮೇಲೆ ಟೌನ್‌ಹಾಲತ್ರ ವೆಂಕುಗೆ ಟಾಟಾ ಹೇಳಿ ಅವನ ಮನೆಗೆ ಕಳ್ಸಿದ್ದೆ. ನಾನು ಮರೆಯಾದ ತಕ್ಷಣ ಅವನು ಟವ್ನ್‌ಹಾಲ್ ವರಾಂಡಾ ಸೇರ್ಕೊಂಡ್ನಂತೆ!

"ಶೌರಿ- ವೆಂಕಟೇಶ್ ಮೂರ್ತಿಗಳು ಎಂದೆಂದು ರಾತ್ರಿ ಮನೆಗೆ ಹೋಗೊಲ್ಲ-

"ಅಂದಂದು ನಿಮ್ಮ ಜೊತೆ ನರ್ಸಿಂಗ್ ಹೋಮ್‌ನಲ್ಲಿ ಕಳೀಬೇಕಾಯ್ತು ಅಂತ ಸಮಾಧಾನ ಹೇಳ್ತಾರೆ ಸರ್ ಮನೇಲಿ-

"ಕಾರಣ?"

"ನಿಮಗೆ ಹೊಟ್ಟೆನೋವು ಬರುತ್ತಿರುತ್ತಂತ- ಏನೇನೋ ಪಾನೀಯ ಕುಡಿದುಬಿಟ್ಟು ನರಳ್ತೀರಂತೆ- ನನ್ನೊಬ್ನಿಂದ ನಿಮ್ಮನ್ನ ಸುಧಾರಿಸೋಕೆ ಆಗೋದಿಲ್ವಂತೆ-

"ಇಡಿಯಟ್! ಇವತ್ತು ವೆಂಕೂಗೆ---"

"ಕ್ಷಮ್ಸಿ ಸರ್- ಪಾಪ ಅವರ ತಪ್ಪಲ್ಲ-ಪ್ರಾಯಶಃ ನಾನು ಒಂದು ಬಾರಿ ಮಾತ್ರ ಅವರಿಗೆ ಆ ರೀತಿ ಸಲಹೆ ಮಾಡಿದ್ದನ್ನ ಅವರು ರೂಢಿ ಮಾಡ್ಕೊಂಡು ಬಿಟ್ರು ಸರ್- ಒಂದು ದಿನ ಬೆಳಗ್ಗೆ ನಾನು ಹಾಲು ತರೋಕೆ ಬಚ್ಚಣ್ಣನ ಮನೆಗೆ ಹೋಗಿದ್ದಾಗ ಮೂರ್ತಿಗಳು ಅವನ ಮನೆ ಮಲ್ಲಿಗೆ ಹೂ ಕೀಳ್ತಾ ಇದ್ರು. ಬಚ್ಚಣ್ಣ ಹೊರಗೆ ಬಂದೋನು ಅವರನ್ನ ನೋಡಿಬಿಟ್ಟ. ಇನ್ನೇನು- ರಾದ್ಧಾಂತ ಆಗಬೇಕು- ಅಷ್ಟರಲ್ಲಿ ನಾನು ಬಚ್ಚಣ್ಣನಿಗೆ ಹೇಳ್ದೆ- ಮೂರ್ತಿಗಳು ನಮ್ಮವರು- ನಮ್ಮ ಮನೆ ದೇವರಿಗೆ ಹೂ ಬೇಕಾಗಿತ್ತು-ಅಂತ. ಅವತ್ತೇ ನಂಗೆ ಗೊತ್ತಾಗಿದ್ದು- ವೆಂಕಟೇಶ

ಮೂರ್ತಿಗಳು ರಾತ್ರಿಹೊತ್ತು ಮನೆಗೆ ಹೋಗೊಲ್ಲಾಂತ. ಅಂದು– ಅವರು ಕ್ಲಾಕ್‌ಟವರ್ ಹತ್ರ ರಾತ್ರಿ ಎಲ್ಲಾ ಕಳೆದಿದ್ದರಂತೆ. ನನ್ನ ಕೇಳಿದರು. ಮನೇಲಿ ಏನು ಸಮಾಧಾನ ಹೇಳ್ಲಿ ಅಂತ. ನಂಗೇನೂ ತೋಚ್ಲೇ ಇಲ್ಲ– ಕಡೆಗೆ ಸಲಹೆ ಮಾಡ್ದೆ– ರಾತ್ರಿ ರಾಯರಿಗೆ– ಅಂದರೆ ನಿಮಗೆ– ಹುಷಾರಿರಲಿಲ್ಲ. ನಿಮ್ಮ ಜೊತೆ ಕಳೆದೆ ಅಂತ ಹೇಳೀಂತ ಸಜೆಸ್ಟ್ ಮಾಡ್ದೆ. ಮೂರ್ತಿಗಳ ವೈಫ್ ತುಂಬಾ ವಯೊಲೆಂಟ್ ಅಂತೆ ಸರ್'' ಅಂದ.

ವೆಂಕು ಆಮೇಲೆ ಎಷ್ಟು ರಾತ್ರಿಗಳು ನನ್ನ ಶಿಪ್ರೂಶೇಲಿ ಕಳೆದಿದ್ದಾನೋ ಗೊತ್ತಿಲ್ಲ. ಪ್ರಾಯಶಃ ವೆಂಕೂನೂ ಲೆಕ್ಕ ಇಟ್ಟಿಲ್ಲ.

ಇರಲಿ– ಇದೊಂದು ಫ್ಲ್ಯಾಷ್‌ಬ್ಯಾಕ್.

ವೆಂಕು ಪೂಜೆ ಮುಗಿಸಿಕೊಂಡು ಬಂದ. ನಾನೂ ನನ್ನ ಪ್ರಾತಃ ಕಾಲದ ವಿಧಿಗಳನ್ನು ಮುಗಿಸಿಕೊಂಡು– ಬುಲ್‌ಬುಲ್ ತರಂಗ್‌ನ ಟ್ಯೂನ್ ಮಾಡ್ತಾ ಕೂತಿದ್ದೆ ಹಾಲ್‌ನಲ್ಲಿ.

''ಬಾರಯ್ಯಾ– ಬೆಳಗ್ಗೇನೇ ಬಂದಿದ್ದೆಯಂತೆ– ಏನು ಅಂಥಾ ಅರ್ಜೆಂಟ್ ಕೆಲ್ಸ?'' ಕೇಳಿದೆ.

''ನಿನ್ಹತ್ರ ಯಾರಿಗಿರುತ್ತಯ ಅರ್ಜೆಂಟ್ ಕೆಲ್ಸ. ನನಗೆ ಅರ್ಜೆಂಟ್ ಇರೊದೆಲ್ಲಾ ಶೌರೀ ಸರ್ವಿಸ್ಸು–''

ಅದ್ಯಾರೋ ಜಂಭದ ಮುದ್ಕಿ ಇದ್ಲಂತಲ್ಲಾ– ಅವಳ ಹುಂಜ ಕೂಗಿದ್ರಿಂದ್ಲೇ ಪ್ರಪಂಚಕ್ಕೆ ಬೆಳಗಾಗೋದೂಂತ– ಆ ರೀತಿ ನಂಗೂ ನನ್ನ ಸ್ನೇಹಿತರು ಶೌರೀ ಸರ್ವಿಸ್ಸಿಗಾಗಿ ನನ್ಹತ್ರ ಬಂದಾಗ್ಲೆಲ್ಲ ನನಗೆ– ಅಂದ್ರೆ ಶೌರೀನ ನನ್ನ ಹತೋಟೀಲಿಟ್ಕೊಂಡಿರೋದ್ರಿಂದ ಅಷ್ಟಿಷ್ಟು ಜಂಭ ಬರುತ್ತೆ ನಿಜ. ಜೊತೆಗೆ ಸ್ವಲ್ಪ ಹೊಟ್ಟುರಿ ಕೂಡ ಬರುತ್ತೆ.

''ವೆಂಕು–ನಿನ್ನ ಪ್ರಾಬ್ಲಂ ಏನು?'' ಕೇಳ್ದೆ.

''ಅದೆಲ್ಲ ನಿಂಗೆ ಗೊತ್ತಾಗೊಲ್ಲ– ಶೌರೀನ ಕರಿ– ವಿವರಿಸ್ತೇನೆ'' ಅಂದ.

ನನಗೆ ಮೈಯೆಲ್ಲ ಬೆಂಕಿ ಬೆಂಕಿಯಾಯ್ತು.

''ವೆಂಕು, ಶೌರೀಗೊಬ್ಬನಿಗೇ ಅಲ್ಲ ಬ್ರೆಯಿನಿರೊದು! ನಿನ್ನ ಪ್ರಾಬ್ಲಂ ಏನು ಹೇಳು, ನಾನು ಸಾಲ್ವ್ ಮಾಡ್ತೇನೆ'' ಅಂದೆ.

ಭೇತಾಳನಂತೆ ಬಿಳ್ಚಿಕೊಂಡ ವೆಂಕು.

''ಪಾಂಡು–ಪ್ಲೀಸ್ ನೀನೇನೂ ತಿಳ್ಕೊಬೇಡ. ಬ್ರಹ್ಮ ನಂಗೂ ನಿಂಗೂ ಬ್ರೆಯಿನ್ ಇಡೋದೇ ಮರೆತುಬಿಟ್ಟ. ನನ್ನ ಸಮಸ್ಯೇನ ಇತ್ಯರ್ಥ ಮಾಡೋಕೆ ದಯವಿಟ್ಟು ನೀನು ಪ್ರಯತ್ನ ಮಾಡ್ಬೇಡ– ಅಂತ ಕೈ ಮುಗಿದ.

ಒಂದು ಬಾರಿ ನಮ್ಮ ಮೈಗಳ್ಳರ ಸಂಘದಲ್ಲಿ– ನಮ್ಮ ಸಂಘದ ಅಧ್ಯಕ್ಷ ಟಿಪ್ಸಿ–ಯಾವುದೋ ಪ್ರಾಬ್ಲಂ ಡಿಸ್‌ಕಸ್ ಮಾಡ್ತ ಮಧ್ಯೆ ಇದ್ದಕ್ಕಿದ್ದ ಹಾಗೇ ಟೇಬಲ್ ಕುಟ್ಟಿ– "ನಾವೆಲ್ರೂ ಮುಟ್ಠಾಳ್ರು ಕೇಳ್ರೋ!" ಅಂತ ಅರಚಿದ್ದ. ನಾವೆಲ್ರೂ ಹೌದೂಂತ ತಕ್ಷ ನಮ್ಮ ಕೈಗಳನ್ನೆತ್ತಿದ್ವು. ಈಗ ವೆಂಕು ಹೇಳಿದ ಸತ್ಯ ಸಂಗತೀಗೆ ನಾನು ಕೈ ಎತ್ತಬೇಕಾಯ್ತು. ಶೌರೀಗೆ ಅದ್ಯಾವ ರೀತಿ ಟೆಲಿಪತೀ ಇನ್ಫರ್‌ಮೇಷನ್ ಹೋಯ್ತೋ– ಎರಡು ಲೋಟಗಳಲ್ಲಿ ಕಾಫಿ ತುಂಬಿಕೊಂಡು ನಮ್ಮ ಮುಂದೆ ಪ್ರತ್ಯಕ್ಷನಾದ.

ನನ್ನ ಮನಸ್ಸಿನಲ್ಲಿದ್ದ ಟೆನ್‌ಷನ್ ಮಾಯವಾಯ್ತು.

"ವೆಂಕು–ಕಾಫಿ ಬಸ್ಕೊಂಡು ಬಿಟ್ಟು ನಿನ್ನ ಪ್ರಾಬ್ಲಂ ಏನೇನಿವೆ– ಶೌರಿ ಹತ್ರ ಒಪ್ಸು– ನೀನುಂಟು ಅವನುಂಟು" ಅಂತ ಹೇಳಿ–ನನ್ನ ಲೋಟ ಕಾಫಿ ಕುಡಿದು ನಾನು ಎದ್ದೆ.

ನನ್ನ ಪ್ರಾಬ್ಲಮ್ಸ್‌ಗಳನ್ನಾಗ್ಲೀ– ನನ್ನ ಮುಟ್ಠಾಳ ಸ್ನೇಹಿತರ ಪ್ರಾಬ್ಲಮ್ಸ್‌ಗಳನ್ನಾಗ್ಲೀ– ನಾನು ಶೌರಿ ತಲೇ ಮೇಲೆ ಹೊರಿಸಿದ ಮೇಲೆ–ನಂಗೆ ಪುನಃ ಆ ಪ್ರಾಬ್ಲಮ್ಸ್‌ಗಳ ನೆನಪೇ ಇರೋದಿಲ್ಲ. ನಮ್ಮ ಭಾರತದ ಕ್ರಿಕೆಟ್ ಟೀಮ್ ಒಂದು ಇನ್ನಿಂಗ್ಸ್ ವ್ಯತ್ಯಾಸದಲ್ಲಿ ಮ್ಯಾಚ್‌ನಲ್ಲಿ ಸೋತಹಾಗೆ– ಕಂಪ್ಲೀಟ್ ಡೆತ್–ಆಫ್–ದಟ್‌ಪ್ರಾಬ್ಲಂ. ಸಂಘದಲ್ಲಿ ವೆಂಕೂನ ಕಂಡಾಗ ಕೂಡ ಅವನ ಸಮಸ್ಯೆ ನನ್ನ ಜ್ಞಾಪಕಕ್ಕೆ ಬರ್ಲಿಲ್ಲ. ನಾಲ್ಕೈದು ದಿನಗಳು ಕಳೆದಿರಬಹುದು– ಡೋಂಟ್‌ಫಿಕರ್ ಬಸ್ ಸರ್ವಿಸ್ ಕಂಡಕ್ಟರ್ ಖಾದರು– ನಮ್ಮ ಮೈಗಳ್ಳರ ಸಂಘದ ಒಂದು ಸ್ಪೆಷಲ್ ಸೆಷನ್ನಲ್ಲಿ–ಕೆಸ್ಟೋ ಮುಖರ್ಜೀನ ಇಮಿಟೇಟ್ ಮಾಡ್ತಿದ್ದಾಗ–ವೆಂಕು ಇದ್ದಕ್ಕಿದ್ದ ಹಾಗೇ ನನ್ನ ಗ್ಲಾಸಿಗೆ ತನ್ನ ಕೋಟಿನ ಒಳ ಜೇಬಿನಿಂದ ತೆಗೆದ ಬಾಟ್ಲಿಂದ ಏನೋ ಹೊಯ್ದ.

"ಏನೋ ಇದು?" ಅಂದೆ.

"ಅಸ್ಲೀ ಬ್ಲಾಕ್‌ನೈಟ್– ಡೊಮಿಂಗೋನ ಕೇಳಿ ತಕೊಂಬಂದೆ– ನಿಂಗೆ ಮಾತ್ರ" ಅಂತ ವ್ಹಿಸ್ಪರಿದ.

"ಇದೇನಪ್ಪ ಅಪರೂಪದ ಟ್ರೀಟು?" ಅಂತ ನಾನೂ ಡಿಟೋ.

"ಶೌರೀ ಪ್ಲಾನ್ ಸಕ್ಸಸ್!"

ತಕ್ಷಣ ನನಗೆ ವೆಂಕು ಸಮಸ್ಯೆ ಜ್ಞಾಪಕಕ್ಕೆ ಬಂತು.

"ಓ ನಿನ್ನ ಮನೇಲಿ ವಕ್ರಿಸಿದ್ದ ನಿನ್ನತ್ತೇನ ಹೊರಗಟ್ಟಿದ್ದಾಯ್ತಾ?" ಅಂತ ಕೇಳಿದೆ.

ಹಿಂದೆ ಒಂದು ಬಾರಿ– ನನ್ನ ಬುಲ್‌ಬುಲ್ ತರಂಗ್‌ಗುರು ತಿಪ್ಪಣ್ಣನ ಅಂಟೀ ಅವನ ಮನೇಲಿ ಝಾಂಡಾ ಹಾಕಿದ್ದಾಗ–ತಿಪ್ಪಣ್ಣನ ವೈಫ್ ನನ್ನ ಚಿಕ್ಕಪ್ಪ ವಿಷಕಂಠರಾಯರ ಸ್ಟೆಪ್‌ಡಾಟರು–ಅಂದ್ರೆ ರಿಟೈರ್ಡ್ ಪ್ಯಾಲೆಸ್ ಡ್ಯಾನ್ಸರ್ ಮಾಲಾಕ್ಷಮ್ಮನ ಪೂರ್ವಾಶ್ರಮದ ಮಗಳು ಗುಲಾಬಿ ಮಾಲಾ– ಶೌರಿ ಹತ್ರ ದೂರು

ಕೊಟ್ಟಿದ್ಲು. ಆ ಆಂಟೀನ ಶೌರಿ–ಭೂತಾನ ಓಡಿಸಿದ ಹಾಗೆ ಓಡಿಸಿದ್ದ ತಿಪ್ಪಣ್ಣನ ಮನೆಯಿಂದ. ವೆಂಕೂದೂ ಅದೇ ರೀತಿ ಸಮಸ್ಯೆ ಅಂದುಕೊಂಡೆ.

''ಮಾವ ಅತ್ತೇನಯ್ಯ ನಂಗೆ? ನನ್ನಕ್ಕನ ಮಗಳೇ ಅಲ್ವೆ ನನ್ನ ವೈಫು?''

ವೆಂಕು ಮಾತು ಕೇಳಿ ನಾನು ಬೋಲ್ಡ್ ಆದೆ.

''ಸಾರಿ ವೆಂಕು– ನಿನ್ನ ಬ್ರದರ್ ಇನ್‌ಲಾ ಪ್ರಾಬ್ಲಂ ಅಂತ ಹೇಳೋದು ಬಿಟ್ಟು ಮದರ್ ಇನ್‌ಲಾ ಅಂದು ಬಿಟ್ಟೆ––

''ಪಾಂಡು–ನನಗಿರೋನು ಒಬ್ನೇ ಬ್ರದರ್‌ಇನ್‌ಲಾ. ಜೆಮ್ಮು. ಯುವರಾಜಾ ಕಾಲೇಜಿನಲ್ಲಿ ರೀಡರ್ ಆಗಿದ್ದಾನೆ––

ನಾನೀಗ ಹಿಟ್– ವಿಕೆಟ್ ಮಾಡ್ಕೊಂಡಿದ್ದೆ.

''ಹಾಗಾದ್ರೆ ನಿಂಗೂ ನಿನ್ನ ವೈಫ್‌ಗೂ––

''ಅದನ್ನ ಸಾಲ್ವ್ ಮಾಡೋಕೆ ಶೌರಿ ತಾತನಿಂದ್ಲೂ ಸಾಧ್ಯವಿಲ್ಲ––

''ಹಾಗಾದ್ರೆ ನಿನ್ನ ಹಾಳು ಪ್ರಾಬ್ಲಂ ಏನು? ಶೌರಿ ಏನು ಕಡಿದ– ಅದನ್ನಾದ್ರು ಬೊಗಳು!'' ಅಂದೆ– ನಾಕನೇ ಬಾರಿ ಬ್ಲಾಕ್‌ನೈಟ್ ಸಿಪ್ ಮಾಡ್ತಾ.

''ಪಾಂಡು–ಆ ದಿನ ಟಿಪ್ಸಿ ನಮಗೆಲ್ಲಾ ಪಾರ್ಟಿ ಕೊಟ್ನಲ್ಲಾ–

''ಅವನ ಎಂಟೊರ್ಷದ ಅಧ್ಯಕ್ಷತೆ ಮುಗಿದಿದ್ದಕ್ಕೆ––

''ಯೆಸ್– ಆ ರಾತ್ರಿ ಪೂರ್ತಿ ನಾನು ಕೋಟೆ ಆಂಜನೇನ ಗುಡಿದ್ವಾರದಲ್ಲೇ ಕಳೆದೆ––

''ಭಗವಂತಾ!''

''ಯಸ್–ಆಂಜನೇಯ. ಮಾರನೇ ದಿನ ಯಾರೋ ವಿ.ಐ.ಪೀ.ಸು ನಗರಕ್ಕೆ ಬಂದಿದ್ರಲ್ಲಾ––

''ಇಟಲಿಯಿಂದ್ಲೋ ಸ್ಪೇನಿಂದ್ಲೋ ದೊರೆದೊರೆಸಾನಿಗಳು––

''ಯಸ್– ಇರಬೇಕು– ಅವರ ಕಣ್ಣುಗಳಿಗೆ ನಮ್ಮೂರಿನ ಬೆಗ್ಗರ್ಸ್ ಬೀಳಬಾರ್ದು ಅಂತ– ಗುಡಿಗಳ ಮುಂದೆ ಮಲಗಿರೋ ಬಿಕ್ಷುಕರನ್ನೆಲ್ಲಾ ರೌಂಡಪ್ ಮಾಡಿ ಮೈಸೂರು ಗಡಿಯಾಚೆ ಬಿಟ್ರಲ್ಲಾ––

''ವೆಂಕೂ!''

''ಯೆಸ್ ಪಾಂಡು– ಕೋಟೆ ಆಂಜನೇಯನ ಗುಡಿ ದ್ವಾರದಲ್ಲಿ ಮಲಗಿದ್ದ ಬಿಕ್ಷುಕರ ಮಧ್ಯ ನಾನೂ ಮಲಗಿದ್ದೆ. ಅವರುಗಳ ಜೊತೆ ನನ್ನೂ ವ್ಯಾನ್ನಲ್ಲಿ–– ಇದು ನಗೋ ವಿಷಯ ಅಲ್ಲ ಪಾಂಡು–''

ಕಷ್ಟದಿಂದ ನಗು ತಡಕೊಂಡೆ.

"ಸಾರಿ ವೆಂಕು- ನಂಗೆ ಕೆಸ್ತೋಮುಖರ್ಜಿ ಜ್ಞಾಪಕಕ್ಕೆ ಬಂದ- ಮುಂದೇನಾಯ್ತು?"

"ಅದಾದ ಮೂರನೇ ದಿನ ಬೆಳಿಗ್ಗೆ ನಮ್ಮನೆಗೆ ಬಿಕ್ಷಕ್ಕೆ ಬಂದ ಕವಳಾ ತಾಯಿ- ನನ್ನನ್ನ ನೋಡಿ-ನೀವೇ ಅಲ್ವಾ ಮೊನ್ನೆ ರಾತ್ರಿ ನಮ್ಜೊತೇಲಿ ಕೈದಾಗಿ ವ್ಯಾನೊಳ್ಗಿದ್ದೋರು? ಅದ್ಯಾಕ್ರಾ- ಇಂತಾ ಮನೀ ಮಡಕ್ಕೊಂಡು ಬಿಕ್ಸೆ ಬೇಡೋಕೆ ಬಂದಿದ್ರಾ?- ಅಂತ ಕೇಳಿಬಿಟ್ಟನಯ್ಯ-

"ಭಗವಂತಾ!"

"ಯಸ್-ಅವನ್ನೇ ಕೂಕ್ಕೊಂಡ್ಬು ನನ್ನ ವೈಫು-ತಲೆ ಚಚ್ಚಿಕೊಳ್ತಾ-- ಅವಳ ತಲೇ----ಪಾಂಡು,ನಕ್ಕರೆ ವದ್ದು ಬಿಡ್ತೇನೆ--ತಲೆ--"

ಡೊಮಿಂಗೋ ಕೊಟ್ಟಿದ್ದ ಸ್ಟಾಕ್ ಮುಗಿದಿತ್ತು. ವೆಂಕು ನಾಲ್ಕನೇ ಬಾರಿ- ನಕ್ರೆ ವದ್ದು ಬಿಡ್ತೇನೆ!-ಅಂತ ಕಿರುಚಿಕೊಂಡಾಗ ನಾನೂ, ಕಿಟ್ಟಿ, ಟಿಪ್ಸಿ ಸೇರಿ ಅವನ್ನ ಸಂಘದಿಂದ ಹೊರಕ್ಕೆ ಕರ್ಕೊಂಡು ಬಂದ್ವು. ಕಿಟ್ಟೀ ವೆಂಕೂನ ಮನೆಗೆ ಕರ್ಕೊಂಡು ಹೋದ. ಟಿಪ್ಸೀಗೆ ಬೈಬೈ ಹೇಳಿ ನಾನು ನನ್ನ ಮನೆ ಸೇರಿದೆ.

ಟೇಬಲ್ ಮೇಲೆ ಊಟ ರೆಡಿಯಾಗಿತ್ತು. ಮುಗಿಸಿದೆ.

ಟಿ.ವಿ. ಆನ್ ಮಾಡ್ದೆ. ಪಾರ್ಲಿಮೆಂಟ್ ತಿಥಿ ಆಗ್ತಾ ಇತ್ತು. ಆಫ್ ಮಾಡಿ ಡನ್‌ಹಿಲ್ ಹಚ್ಚಿ ಬುಲ್‌ಬುಲ್ ತರಂಗ್ ಕೈಗೆತ್ತಿಕೊಂಡೆ. ಹಾಗೇ ಕೈಯಾಡಿಸಿದೆ. ಮನುಜ ಶರೀರವಿದೇನು ಸುಖಾ- ಕೀರ್ತನೆ ಟ್ಯೂನ್ ಬಂತು-- ವೆಂಕು! ಅವನ ಪ್ರಾಬ್ಲಂ ಏನೂಂತ ಶೌರೀನ ಕೇಳ್ಬೋಬೇಡ್ವೋ?--

"ಸರ್-- ಅಂತ ಶೌರಿ ಘಮಘಮಾ ಹಲಸಿನ ತೊಳೆ ತಂದಿಟ್ಟ.

"ಏನು ಸಮಾಚಾರ ಶೌರಿ?"

"ಮರ್ತೇಬಿಟ್ಟಿದ್ದೆ ಸರ್- ಉಜ್ಜನಪ್ಪ ಬಂದಿದ್ದ- ಇವತ್ತಿನ ಘಂಟಾಘೋಷ ಪೇಪರ್ ಕೊಟ್ಟಿಟ್ಟು ಹೋದ" ಅಂತ ನನ್ನ ಕೈಲಿ ಪೇಪರ್ ಇಟ್ಟ.

ಘಂಟಾಘೋಷ- ನಗರದ ದೈನಂದಿನ ಪತ್ರಿಕೆ. ಉಜ್ಜನಪ್ಪ ಅದರ ಎಡಿಟರು. ಪೇಪರ್ ಬಿಚ್ಚಿದೆ.

ಷಾಕ್! ವೆಂಕು ಫೋಟೋ!!!

"ಶೌರೀ! ಕೂಗಿದೆ.

"ಓದಿಸರ್-ಮುಂದೆ"ಅಂದ.

ಓದಿದೆ-ವೆಂಕು ಫೋಟೋ ಕೆಳಗೆ-

**"ಎಲೆಮರೆಯಲ್ಲಿ ಸೇವೆ**

ನಗರದ ಹೊಸಕೇರಿ ಬಡಾವಣೆಯ ಶ್ರೀಮಾನ್ ವೆಂಕಟೇಶ ಮೂರ್ತಿ ತಮ್ಮ ಮಿತ್ರರಿಗೆ "ವೆಂಕು" ಅವರು, ಮೊನ್ನೆ ರಾತ್ರಿ ತಮ್ಮ ಕಾರ್ಯಾಗಾರದಿಂದ ದಣಿದು ಮನೆಗೆ ವಾಪಾಸಾಗುತ್ತಿದ್ದಾಗ, ಕೋಟೆ ಆಂಜನೇಯನ ಗುಡಿ ಮುಂದೆ ಒಬ್ಬ ಬಿಕ್ಷುಕ ಹಠಾತ್ತನೆ ಮೂರ್ಛಿತನಾಗಿದ್ದುದನ್ನು ಕಂಡು ತಕ್ಷಣ ಅವರ ಸೇವೆಯಲ್ಲಿ ನಿರತರಾದರು. ಇದು "ವೆಂಕು" ಅವರ ಹುಟ್ಟು ಗುಣ. ಹಿಂದೆ ಒಂದು ಇಡೀ ರಾತ್ರಿ ಜ್ವರದಿಂದ ನರಳುತ್ತಿದ್ದ ಬಿಕ್ಷುಕನೊಡನೆ ಕ್ಲಾಕ್‌ಟವರ್ ಅಡಿಯಲ್ಲೇ ಕಳೆದಿದ್ದಾರೆ.

ಆದರೆ ಶ್ರೀ ವೆಂಕು ಅವರ ಈ ಒಳ್ಳೆಯ ಗುಣವೇ ಅವರಿಗೆ ಕಂಟಕವಾಗಿರುವ ಹಾಗಿದೆ. ಮೊನ್ನೆ ನಗರಕ್ಕೆ ಆಗಮಿಸಿದ ಪಾಶ್ಚಾತ್ಯ ದೊರೆ ದೊರೆಸಾನಿಗಳಿಗೆ ನಮ್ಮ ನಗರದ ಭಿಕ್ಷುಕರು ಕಾಣಿಸಬಾರದೆಂಬ ಡಾಂಬಿಕ ಧೋರಣೆಯಿಂದ ನಗರದ ಅರಕ್ಷಕದಳದವರು ಭಿಕ್ಷುಕರೊಡನೆ ನಮ್ಮ "ವೆಂಕು" ಅವರನ್ನೂ ವ್ಯಾನಿನಲ್ಲಿ ಹೇರಿಸಿಕೊಂಡು ಹುಣಸೂರು ರಸ್ತೆಯಲ್ಲಿ ಸುಮಾರು ಮೂವತ್ತು ಕಿಲೋ ಮೀಟರ್ ದೂರ ಕರೆದುಕೊಂಡು ಹೋಗಿ ನಿರ್ಜನ ಪ್ರದೇಶದಲ್ಲಿ ಬಿಟ್ಟು ಬಂದರು. ಶ್ರೀ "ವೆಂಕು" ಅವರು ತುಂಬಾ ಪ್ರಯಾಸದಿಂದ ಮರು ದಿನ ಜೀವಸಹಿತ ನಗರಕ್ಕೆ ವಾಪಸು ಬಂದರು. ಅದೊಂದು ಅಚ್ಚರಿ ಮತ್ತು ಅವರ ಪತ್ನಿಯ ಮಾಂಗಲ್ಯ ಭಾಗ್ಯ. ಆರಕ್ಷಕದಳದವರು ಈ ರೀತಿ ಸಾಧು ಜನರನ್ನು ಹಿಂಸಿಸುತ್ತಿರುವುದು ನಮ್ಮ ನಗರಕ್ಕೇ ಅಲ್ಲದೆ- ಇಡೀ ದೇಶಕ್ಕೇ ಹಾನಿಕರವಾದ ಕಾರ್ಯ. ನಗರದ ಅನೇಕ ಹಿರಿಯರು-ನಮ್ಮ ರಾಜ್ಯಕ್ಕೆ ಪುನಃ ಮೈಸೂರು ರಾಜರ ಆಡಳಿತ ಬರಲೆಂದು ಹಾರೈಸುತ್ತಿದ್ದಾರೆ. ಶ್ರೀ "ವೆಂಕು" ಅವರಿಗೆ ಘಂಟಾಘೋಷ ತುಂಬು ಹೃದಯದಿಂದ ನಮಿಸುತ್ತದೆ- ಸಂ.."

ಈ ವರದಿಯನ್ನು ಅರಗಿಸಿಕೊಳ್ಳೋಕೆ ನನಗೆ ಸ್ವಲ್ಪ ಸಮಯ ಬೇಕಾಯ್ತು.

"ಯಾರಿದನ್ನ ವರದಿ ಮಾಡಿದ್ದು?" ಶೌರೀನ ಕೇಳಿದೆ.

"ಕಂಪ್ರೋಸ್ ಮಾಡಿದ್ದು ನಾನೇ ಸರ್- ಉಜ್ಜನಪ್ಪನಿಗೆ ಒತ್ತಕ್ಷರಗಳು ಗೊತ್ತಾಗೊಲ್ವಲ್ಲಾ ಸರ್-

ನಾನು ಮೌನವಾಗಿದ್ದೆ.

"ವೆಂಕಟೇಶ ಮೂರ್ತಿಯವರಿಗೆ ಅವರ ಮನೇಲಿ ದೃಷ್ಟಿ ತೆಗೆದರಂತೆ ಸರ್--

"ಯಾರು?!"!

"ಅವರಕ್ಕ ಸರ್- ಅವರಕ್ಕನೇ ಅವರ ಅತ್ತೇನೂ ಸರ್- ಅಂದರೆ ಅವರ ಪತ್ನಿ ತಾಯಿಸರ್-

ನನ್ನ ಮೌನ ಮುರಿಯೋ ಕಾಲ ಬಂದಿತ್ತು.

"ಮಲಕ್ಕೋ ಹೋಗು ಶೌರಿ."

"ಸರಿ ಸರ್-ಫ್ಲಾಸ್ಕ್‌ನಲ್ಲಿ ಬಿಸಿ ನೂಟ್ರಮುಲ್ ಹಾಕಿಟ್ಟಿದ್ದೇನೆ" ಅಂತ ಹೇಳಿ ಅದೃಶ್ಯನಾದ.

---

## ನಿರೋಗಿ

ಎಲ್ಲರಿಗೂ

ತಾಗಿಲ್ಲ ಇನ್ನೂ

ಅಧಿಕಾರದ ಮೇನಿಯಾ

ಅನ್ನೋದಕ್ಕೆ

ಉದಾಹರಣೆ

ಶ್ರೀಮತಿ ಸೋನಿಯಾ

**-ಎಚ್. ಡುಂಡಿರಾಜ್**

ಬರಹಗಾರರಿಗೆ ಸುಲಭ ಪಾಠಗಳು:

# ಪತ್ತೇದಾರಿ ಕಥೆಗಳು

–ಪ್ರಕಾಶ್

"ಪತ್ತೆದಾರ ಶರಲೇಖ ಸೋಫದಿಂದ ಎದ್ದ. ಹಾ! ಅನ್ನುತ್ತ ಹೂವನ್ನು ಮೂಸಿನೋಡಿದ. ನಾನು ಬೆರಗಾಗಿ ನೋಡಿದೆ. 'ಈ ಹೂವನ್ನ ಕಿತ್ತವನು ಕನ್ನಡಕಧಾರಿ, ಬಲಗಣ್ಣು ಮೆಳ್ಳುಗಣ್ಣು!' ಅಂದ: ಅದು ಹೇಗೆ ಗೊತ್ತು ಶರಲೇಖ? ಅಂದೆ ನಾನು. ಇದೆಲ್ಲ ಗೊತ್ತುಮಾಡಿಕೊಳ್ಳುವುದೇ ನನ್ನ ಕೆಲಸ! ಅಂತ ನಕ್ಕು ಶರಲೇಖ ಪಿಟೀಲು ಬಾರಿಸಲು ಆರಂಭಿಸಿದ."

ಈ ರೀತಿ ಶುರುಮಾಡಬಹುದು. ಪ್ರಸಿದ್ಧ ಪತ್ತೇದಾರಿ ಕತೆಗಳಲ್ಲಿ ಮುಖ್ಯವಾದದ್ದು ಎರಡು, ಪ್ರಸಿದ್ಧ ಪತ್ತೇದಾರನೊಬ್ಬ; ತೀರ ಅಮಾಯಕ ಸೈಡ್ ಕಿಕ್ ಒಬ್ಬ. ಈ ಅಮಾಯಕನ ಕೆಲಸ ಹಲವಾರು. ಯಾವಾಗಲೂ ಬೆರಗಾಗಬೇಕು, ಯಾವಾಗಲೂ ಚಕಿತನಾಗಲು ಸಿದ್ಧನಾಗಿರಬೇಕು. ಪ್ರ.ಪ.ನ ಕೃತ್ಯಗಳನ್ನು ನೋಡಿ, ಅರ್ಥವಾಗದೆ ಬಾಯಿ ಬಿಡುತ್ತಿರಬೇಕು. ಹಾಗೇ ಪ್ರ.ಪ.ನಿಂದ ಆಗಾಗ್ಗೆ ಹೀಯಾಳಿಸಿಕೊಳ್ಳಲು ಕಾತರನಾಗಿರಬೇಕು. ಈ ಇನ್‌ಗ್ರೀಡಿಯೆಂಟ್ಸ್ ಇದ್ದರೆ ನಿಮ್ಮ ಕತೆ ಕಸದ ಬುಟ್ಟಿಗೆ ಸೇರುವ ಚಾನ್ಸಸ್ ಬಹಳ ಕಮ್ಮಿಯಾಗುತ್ತೆ.

ಇನ್ನೊಂದು ಆರಂಭ ಮಾರ್ಗ ಪರಿಶೀಲಿಸಿ.

"ರಾಜಾರಾಯರು ಮನೆಯಲ್ಲಿ ಒಬ್ಬರೇ ಕೂತಿದ್ದರು. ರಾತ್ರಿ ಒಂಬತ್ತು ಗಂಟೆ ಸಮಯ. ಜವಾನರ ಕ್ವಾರ್ಟರ್ಸ್‌ನಲ್ಲಿದ್ದ ಜವಾನನನ್ನ ಬಿಟ್ಟರೆ ಆ ದೊಡ್ಡ ಮನೆಯಲ್ಲಿ ಯಾರೂ ಇರಲಿಲ್ಲ. ರಾಜಾರಾಯರು ಓದುತ್ತಿದ್ದ ಕಾದಂಬರಿಯನ್ನು ಕೆಳಗಿಟ್ಟು ಕಿಟಕಿಯ ಬಳಿಗೆ ಬಂದು ನಿಂತರು."

ಮೂರ್ಖ ರಾಜಾರಾಯರು! ಈ ರೀತಿ ಶ್ರೀಮಂತರು ರಾತ್ರಿ ಒಬ್ಬರೇ ಕಿಟಕಿಯ ಹತ್ತಿರ ನಿಲ್ಲಬಹುದೇ? ಹೊರಗೆ ನಡೆಯುತ್ತಿರುವ ಖದೀಮರು ಯಾರಾದರೂ ಅವರನ್ನು ಸುಮ್ಮನೇ ಬಿಟ್ಟಾರೆಯೇ? ರಾಜಾರಾಯರು ಕೂಗಿದರೂ, ದೂರದಲ್ಲಿ ಮಲಗಿರುವ ಜವಾನನಿಗೆ ಅವರ ಆರ್ತನಾದ ಕೇಳುತ್ತದೆಯೇ?

ಈ ಎರಡೂ ಆರಂಭಗಳೂ ಸೂಕ್ತ ಕಾಣದಿದ್ದರೆ, ಹೀಗೆ ಶುರು ಮಾಡಬಹುದು.

ಬಕರ ರಸ್ತೆಯ ನಮ್ಮ ಮನೆಯ ಕಿಟಕಿಯ ಬಳಿ ನಾನು ನಿಂತಿದ್ದೆ. ಹೊರಗೆ ದಟ್ಟವಾದ ಮಂಜು. ಶರಲೇಖ ಇನ್ನೂ ನಿದ್ರಾದೇವಿಯ ವಶದಲ್ಲಿದ್ದ. ದಢದಢನೆ ಬಾಗಿಲು ತಟ್ಟಿದ ಸದ್ದು. ನಾನು ಬಾಗಿಲು ತೆಗೆದೆ. ಗೌರವರ್ಣದ, ದೃಢಕಾಯ ವ್ಯಕ್ತಿಯೊಂದು ಒಳಗೆ ತತ್ತರಿಸುತ್ತ ಬಂದು. 'ನಾನು...., ನಾನು....! ಅನ್ನುತ್ತ ನೆಲದ

ಮೇಲೆ ಬಿತ್ತು! ನಾನು ತಣ್ಣೀರು ತಟ್ಟಿ ಆ ವ್ಯಕ್ತಿಯನ್ನು ಎಚ್ಚರಿಸಿದೆ. ಶರಲೇಖ ತನ್ನ ಕೊರಡಿಯಿಂದ ಹೊರಬಂದ, 'ವತ್ಸನ! ನಮ್ಮ ರಾಜ್ಯದ ಮುಖ್ಯಮಂತ್ರಿಗಳು! ನಮ್ಮ ಮನೆಗೆ ಬರಲು ಏನೋ ಗಹನ ಕಾರಣ ಇರಬೇಕು! ಅವರನ್ನ ಸೋಫಾದ ಮೇಲೆ ಮಲಗಿಸಿ, ಕಾಫಿ ಕೊಡು' ಅಂದ.

ಬಹ ಓದುಗರು ಮುಖ್ಯಮಂತ್ರಿಯ ರಹಸ್ಯ ಭೇಟಿಯ ಕಾರಣ ಹುಡುಕಲು ಮುಂದೆ ಓದುವುದರಲ್ಲಿ ಸಂಶಯವಿಲ್ಲ. ಆದರೆ ಇನ್ನು ಕೆಲವು ಹಾರ್ಡ್ ಕೋರ್ ಓದುಗರಿಗೆ ಈ ರೀತಿ ಸಟಲ್, ನಯವಾದ ಬಿಗಿನಿಂಗುಗಳು 'ಗೋರ್ಕಲ್ಲ ಮೇಲೆ ಮಳೆಗರೆದಂತೆ!' ಅವರಿಗೆ ಮೊದಲು ಎರಡು ಪುಟದಲ್ಲಿ 'ಬಾಡಿ' ಸಿಗದಿದ್ದರೆ ನಿದ್ರೆ ಬರುಲ್ಲ! ಅಂತಹ ಓದುಗರಿಗೆ ಮಾದರಿ;

ನಗರದ ಪ್ರಸಿದ್ಧ ವರ್ತಕ ಮಿಸ್ರಿಮಲ್ ಮನೆ ಬಡಾವಣೆಯ ದೊಡ್ಡಮನೆ. ಹೊರಗೆ ದೊಡ್ಡ ತೋಟ, ಎರಡು ಭಾರೀ ನಾಯಿಗಳು, ಆಳು, ಕಾಳು ಇತ್ಯಾದಿ. ಗೇಟಿನಿಂದ ಮನೆಗೆ ಹೋಗಲು ಕಾವಲುಗಾರನ ಅನುಮತಿ ಇಲ್ಲದೆ ಸಾಧ್ಯವಿಲ್ಲ. ಮಿಸ್ರಿ ಶ್ರೀಮಂತನಾದಷ್ಟೂ ದರೋಡೆಕಾರರ ಭಯ ಹೆಚ್ಚುತ್ತಿತ್ತು! ಬೆಳಗ್ಗೆ ಆರು ಗಂಟೆ. ಹೊರಗೆ ಹಕ್ಕಿಗಳ ಚಿಲಿಮಿಲಿ. (ಹಕ್ಕಿಗಳಿಗೆ ಕಾವಲುಗಾರರ ಅಪ್ಪಣೆಯೇ?). ನೌಕರ ಮಿಸ್ರಿಯ ಕೋಣೆ ಬಾಗಿಲು ಮೃದುವಾಗಿ ತಟ್ಟಿ, ಬೆಡ್ ಚಾಯ್ ಸಾಬ್ ಅಂತ ಕೂಗಿದ. ಇದೇ ಆ ಮನೆಯ ಕಟ್ಟಪ್ಪಣೆ. ಬಾಗಿಲು ತೆರೆಯದೇ ಇದ್ದದ್ದರಿಂದ ನೌಕರ ಸ್ವಲ್ಪ ಜೋರಾಗಿ ತಟ್ಟಿದ. ನಿರುತ್ತರ. (ಈಗಾಗಲೇ ಸೀಸನ್ಡ್ ಓದುಗರು ಮಿಸ್ರಿಯ ಹಣೆಬರಹವನ್ನು ಗೆಸ್ಸುಮಾಡುತ್ತಿರುತ್ತಾರೆ!) ನೌಕರ ಬಾಗಿಲು ದೂಡಿ ಒಳಕ್ಕೆ ಹೋದ. ಮಿಸ್ರಿ ನೆಲದ ಮೇಲೆ ಬಿದ್ದಿದ್ದಾನೆ. ತಲೆಯ ಬಳಿ ಹೆಪ್ಪುಗಟ್ಟಿದ ರಕ್ತ! ನೌಕರ ಜೋರಾಗಿ ಚೀರುತ್ತ ಓಡಿ ಹೊರಬಂದ. ಟೀ ಪಾಟ್ ನೆಲದ ಮೇಲೆ ಬಿದ್ದು ನೂರು ಚೂರಾಗಿ ಸಿಡಿಯಿತು! (ಒಡೆದ ಮಿಸ್ರಿ ತಲೆಗೂ, ಟೀ ಪಾಟ್‌ಗೂ ಸಿಂಬಾಲಿಸಂ!)

ಪತ್ತೇದಾರಿ ಕತೆಯ ಇನ್ನೊಂದು ಪ್ರಮುಖ ಇನ್‌ಗ್ರೀಡಿಯೆಂಟ್ ಅಂದರೆ– "ಅದು"! 'ಅದು' ಏನು ಬೇಕಾದರೂ ಆಗಿರಬಹುದು. ಕಳೆದುಹೋದ 8 ಲಕ್ಷ ರೂ. (ಡಿವಾಲ್ಯುಯೇಶನ್‌ಗೆ ಮುನ್ನ!) ಬೆಲೆ ಬಾಳುವ ರತ್ನಹಾರ, ಅಮೋಘವಾದ ಸ್ಟಾಂಪ್ ಕಲೆಕ್ಷನ್, ಗಿರಾಕಿಯ ಮುತ್ತಾತನ ತಾತ ಬರೆದ ವಿಲ್, ಬ್ಲಾಕ್‌ಮೇಲ್ ಲೆಟರ್‌ಗಳು, ಇನ್‌ಕ್ರಿಮಿನೇಟಿಂಗ್ ಫೋಟೋಗಳು ಇತ್ಯಾದಿ, ಇತ್ಯಾದಿ. ಇಲ್ಲಿ ಆ ಪದಾರ್ಥ ಮುಖ್ಯವಲ್ಲ! ಅದರ ಸೈಕಲಾಜಿಕಲ್ ಮಹತ್ವ ಹಿರಿದಾದ್ದು.

ಉದಾ: (ಶರಲೇಖನ ರೂಂನಲ್ಲಿ ಸಂಭಾಷಣೆ)

ಗಿರಾಕಿ: ಶರಲೇಖ ಅವರೇ, ಆ ನೀಚ ನಮ್ಮ ಅಜ್ಜಪ್ಪನವರ ವಿಲ್‌ನ ಕದ್ದು ಇಟ್ಟುಕೊಂಡಿದಾನೆ! ಅದಿಲ್ಲದೆ ನಾವು ಕೋಟ್ಯಾಂತರ ರೂಪಾಯಿ ಆಸ್ತಿ ಕಳಕೋಬೇಕಾಗುತ್ತೆ! ಎಲ್ಲಾ ವಿಧದಲ್ಲೂ ಕೇಳಿ ಆಯ್ತು! ನೀವು ಸಹಾಯ ಮಾಡಿದರೆ ಎಷ್ಟು ಸಂಭಾವನೆ ಕೇಳಿದರೂ ಕೊಡ್ತೇನೆ! ಶರಲೇಖ ವತ್ಸನನ ಕಡೆ ನೋಡಿ ನಕ್ಕ

ವತ್ಸನ: ಶರಲೇಖ ಹಣದ ಆಸೆಗೆ ಯಾವ ಕೇಸನ್ನೂ ಮುಟ್ಟೋದಿಲ್ಲ ಅಂತ ನಿಮಗೆ ಗೊತ್ತಿಲ್ಲವೇ? ತನ್ನ ಪ್ರತಿಭೆಯನ್ನ ಉಪಯೋಗಿಸಲು ಸಿಕ್ಕೋ ಅವಕಾಶಾನೇ ಆತನ ಪ್ರತಿಫಲ! (ಎಲ್ಲ ಕೇಸೂ ಹೀಗೇ ಆದರೆ ಶರಲೇಖನ ಊಟ, ಬಟ್ಟೆ, ಸಿಗರೇಟು ಖರ್ಚು, ಮನೆ ರೆಂಟು ಇತ್ಯಾದಿಗಳನ್ನೆಲ್ಲ ಹೇಗೆ ಪೂರೈಸುತ್ತಿದ್ದ ಎಂಬುದು ಇಲ್ಲಿ ಅಪ್ರಸ್ತುತ)

ಪತ್ತೆದಾರಿ ಕತೆಯ ಕ್ಲೈಮಾಕ್ಸ್ ಬಹು ಮುಖ್ಯ. ಪ್ರ.ಪ. ತನ್ನ ಜಾಣ್ಮೆಯಿಂದ ಸ್ಪೈಡ್ ಕಿಕ್ಕನ್ನ ಪದೇ ಪದೇ ಬೆರಗಾಗಿಸಿ, ಕೊನೇ ಹಂತದಲ್ಲಿ ಉತ್ತರ ನೀಡಬೇಕು! ಸಡನ್ ಟರ್ನಿಂಗ್ ಪಾಯಿಂಟ್ ಇದ್ದರೆ ಸರಿ, ಇಲ್ದಿದ್ರೆ ನಿಮ್ಮ ಕತೆಯ ಬೇಳೆ ಬೇಯೋದಿಲ್ಲ ಸಂಪಾದಕರ ಪಾತ್ರೇಲಿ! ಶರಲೇಖ, ವತ್ಸನರ ಈ ಉದಾಹರಣೆ ನೋಡಿ.

ನನಗಂತೂ ಕೇಸಿನ ತಲೆ-ಬಾಲ ಅರ್ಥವಾಗಲೇ ಇಲ್ಲ. ಶರಲೇಖ ಮಾತ್ರ ಆರಾಮವಾಗಿ ಕೂತು ಸಿಗರೇಟ್ ಹೊಗೆಯಲ್ಲಿ ರಿಂಗ್ ಬಿಡ್ತಾ ಇದ್ದ. ಇನ್ನು ಕೆಲವೇ ನಿಮಿಷದಲ್ಲಿ ಹೀರಾಲಾಲ್ ಬರ್ತಾನೆ, ಆತಂಕದಿಂದ. ಅವನ ಭಾರೀ ವಜ್ರ ಪತ್ತೆ ಮಾಡ್ತೀನಿ ಅಂತ ಮಾತುಕೊಟ್ಟು ಒಂದು ವಾರ ಆಗಿದೆ. ಪೋಲೀಸ್ ಅಧಿಕಾರಿ ಲಸ್ತ್ರದ ಬಂದ. ಮೂರು ರಾಜ್ಯಗಳ ಪೋಲೀಸ್ ವೀರರಿಂದಲೂ ಪತ್ತೆ ಮಾಡಲು ಅಸಾಧ್ಯವಾದ ನಿಗೂಢ ಕಳವು! ಲಸ್ತ್ರದ ತಲೆಯ ಮೇಲೆ ಕೈಹೊತ್ತು ಕುಳಿತ. ಬಾಗಿಲು ತಟ್ಟಿದ ಸದ್ದು. ಹೀರಾಲಾಲ್ ಚಡಪಡಿಸುತ್ತ ಒಳಗೆ ಬಂದ. 'ಶರಲೇಖ, ನನ್ನ ವಜ್ರದ ಸುಳಿವು ಸಿಕ್ಕತೇ? ಇನ್ನು ನನ್ನಿಂದ ಈ ಟೆನ್ಷನ್ ತಡೆಯುಕ್ಕೆ ಆಗೊಲ್ಲ!' ಅಂದ. ಶರಲೇಖ ಶಾಂತನಾಗಿ, 'ಕುಳಿತುಕೋ, ಕಾಫಿ ಚೆನ್ನಾಗಿದೆ!' ಅಂದ ಹೀರಾಲಾಲ್ ಕುಪಿತನಾಗಿ, ನನಗೆ ಈಗ ಕಾಫಿ ಅಗತ್ಯ ಇಲ್ಲ! ಅಂದು ಕುರ್ಚಿಯ ತುದಿಯಲ್ಲಿ ಕುಳಿತ. ಲಸ್ತ್ರದ ಹೇಳಿದ. 'ಶರಲೇಖ, ವಜ್ರದ ಕಳವನ್ನು ಸಾಲ್ವ್ ಮಾಡುತ್ತೇನೆ ಎಂದೆಯಲ್ಲ, ಸಿಕ್ಕಿದನೇ ಕಳ್ಳ?'

ಶರಲೇಖ: 'ಸಿಕ್ಕಿದ್ದಾನೆ!'

ನಾವೆಲ್ಲರೂ ಬೆರಗಾಗಿ ಒಬ್ಬರ ಮುಖ ಒಬ್ಬರು ನೋಡಿದೆವು. ಒಕ್ಕೊರಲಿನಿಂದ ಕೂಗಿದೆವು; 'ಯಾರವನು?'

ಶರಲೇಖ ಮಂದಸ್ಮಿತನಾದ. 'ನನ್ನ ಪರಮ ಮಿತ್ರ, ಜೀವನ ಸಂಗಾತಿ, ಫ್ರೆಂಡ್, ಫಿಲಾಸಫರ್ ಅಂತ ನಂಬಿದ್ದೆನಲ್ಲ, ಅವನೇ!'

ಹೀರಾಲಾಲ್, ಲಸ್ತ್ರದ ಇಬ್ಬರೂ ನನ್ನ ಕಡೆ ದುರುಗುಟ್ಟಿ ನೋಡಿದರು.

ಶರಲೇಖ: 'ಲಸ್ತ್ರದ, ವತ್ಸನನ ಒಳಜೇಬು ನೋಡು!'

ನಾನು ಇಂಗು ತಿಂದ ಮಂಗನಂತೆ ಮುಖಮಾಡಿ ಕುಳಿತೆ.

ಹೀರಾಲಾಲ್, ಲಸ್ತ್ರದ ಗಹಗಹಿಸಿ ನಕ್ಕರು. ಲಸ್ತ್ರದ ಕೇಳಿದ: 'ನಿಜವಾದ ಕಳ್ಳ ಯಾರು?'

ಶರಲೇಖ ನಸುನಗುತ್ತ ಹೇಳಿದ. "ಕೆಲವು ಸಲ ನಿಜವನ್ನ ಮರೆಮಾಡಿಡುವುದೇ ಒಳ್ಳೆಯದು! ಹೀರಾ, ನಿನ್ನ ವಜ್ರವನ್ನ ಇನ್ನು ಮೇಲೆ ಭದ್ರವಾಗಿಡು!'

ಶರಲೇಖ ಪಿಟೀಲು ತೆಗೆದು ಶಂಕರಾಭರಣ ಬಾರಿಸಲು ಆರಂಭಿಸಿದ. ಲಸ್ತ್ರದ ಕೈ ಚಪ್ಪಾಳೆ ತಟ್ಟಿದ.

'ಹೀರಾಲಾಲ್ ಆಭರಣ ಸಿಕ್ಕಿದ ಸಂತೋಷಕ್ಕೆ ಸರಿಯಾದ ರಾಗ! What a sense of timing!'

ನಾನು ನನ್ನ ಜೀವನದ ಮೂವತ್ತು ಸಾವಿರದ ಹದಿನೈದನೇ ಬಾರಿಗೆ ಬೆರಗಾಗಿ ಕುಳಿತೆ!



"ಸ್ಕೂಲ್ ಬ್ಯಾಗ್ ರನ್ನಿಂಗ್ ರೇಸ್‌ನಲ್ಲಿ ಮೊದಲ ಸ್ಥಾನ ಪಡೆದನಂತೆ, ಪಾಪ!"

# ಮೂರು ಕಿರುಗವನಗಳು

ಆರತಿ

## ನಿಷ್ಠೆ

ಮೇರಿಯು ಹಿಂದಿನ ಕುರಿಮರಿಯಂತೆ
ತಲೆಯನು ಬಾಗಿಸಿ ನಡೆಯುವನಾತ
ಹೇಳಿದ ಕೆಲಸವ ಚಾಚೂ ತಪ್ಪದೆ
ಹೇಳುವ ಮುಂಚೆಯೆ ಮಾಡುವನಾತ
ಕೋಪದಿ ರೇಗುತ ಕೂಗಾಡಿದರೆ
ಶಾಂತತೆಯಿಂದಲೆ ಸಹಿಸುವನಾತ
ಅಚ್ಚರಿಯೇತಕ್ಕೆ, ತಾಳಿಯ ಕಟ್ಟಿದ
ಗಂಡನಲ್ಲವೇ ಅವ ನನ್ನ ಪ್ರಾಣಕಾಂತ!

## ಹಣ

ನೆಚ್ಚಿನ ಮಿತ್ರರ ಹೃದಯದ ಸ್ನೇಹ
ಹಣಕ್ಕೂ ಮಿಗಿಲಲ್ಲವೇ?
ಮೆಚ್ಚಿನ ಮಡದಿಯ ನಿರ್ಮಲ ಪ್ರೇಮ
ಹಣಕ್ಕೂ ಮಿಗಿಲಲ್ಲವೇ?
ಉದಿಸುವ ಸೂರ್ಯನ ಕೆಂಪಿನ ಕಿರಣ
ಹಣಕ್ಕೂ ಮಿಗಿಲಲ್ಲವೇ?
ಹೀಗಿದ್ದರೂ ನನ್ನ ಮನೆ ಮಾಲೀಕ
ಹಣ, ಹಣ ಎಂದು ಕೂಗಾಡುವನೇಕೆ?

## ಕ್ಷಮೆ

ನಿನ್ನ ಮಡದಿಯ ಜೊತೆಗೆ ನಲಿದು ಓಡಿದ ಗೆಳೆಯ
–ನಿನ್ನ ಕ್ಷಮೆ ಅವನಿಗಿರಲಿ
ಒಡಕು ಟಿ.ವಿ.ಯ ನಿನಗೆ ಮಾರಿ ತೆರಳಿದ ಮಿತ್ರ
–ನಿನ್ನ ಕ್ಷಮೆ ಅವನಿಗಿರಲಿ
ನಿನ್ನ ಬಾಸಿನ ಮುಂದೆ ಚಾಡಿ ಚುಚ್ಚಿದ ಗೆಳೆಯ
–ನಿನ್ನ ಕ್ಷಮೆ ಅವನಿಗಿರಲಿ
ಇಷ್ಟೆಲ್ಲ ಅನುಭವಿಸಿದ ಪೆದ್ದು ನನ ಮಗನೇ
–ನಿನ್ನ ಕ್ಷಮೆ ನಿನ್ನ ಮೇಲಿರಲಿ.

# 'ಮಾರುತಿ' ಗೀಳು

ಡಾ. ಜ್ಯೋತ್ಸ್ನಾ ಕಾಮತ

ಇಂಜಿನಿಯರಿಂಗ್ ವಿದ್ಯಾರ್ಥಿಯಾಗಿ ಕಾಲೇಜು ಸೇರಿಕೊಂಡದ್ದೇ ನಮ್ಮ ಮಗ ವಿಕಾಸನಿಗೆ ತಾನು ಯಾಂತ್ರಿಕಯುಗದಲ್ಲಿ ದಾಪು ಕಾಲು ಇಟ್ಟ ಅರಿವು ಒಮ್ಮೆಲೇ ಆಯ್ತು. "ವೇಳೆಗೆ ವಿಪರೀತ ಮಹತ್ವ, ಪ್ರ್ಯಾಕ್ಟಿಕಲ್ಸ್‌ಗೆ ಸಕಾಲಕ್ಕೆ ತಲುಪಬೇಕು. ನಡೆದು ಹೋದರೆ ಸುಸ್ತು. ಬಸ್ಸಿಗೆ ರಷ್ಯು!" ಏನೇನೊ ನೆಪ ಹೇಳಿ ತನಗೊಂದು ಸ್ಕೂಟರ್ ಅವಶ್ಯಕತೆ ಇದೆಯೆಂದು ತಂದೆಗೂ ನನಗೂ ಬಿಂಬಿಸಲು ಯತ್ನಿಸಿದ. ನಮ್ಮವರು ಬಗ್ಗಿಯಾರೇ?

"ನಿನ್ನ ಕಾಲೇಜು 15 ನಿಮಿಷದ ನಡಿಗೆ. ಅಬ್ಬಾ! ಎಂದರೆ ಇಪ್ಪತ್ತು ನಿಮಿಷ. ದಿನಾಲು ಅರ್ಧಗಂಟೆ ಬೇಗ ಎದ್ದೆಯೆಂದರೆ ಎಲ್ಲ ಸಮಸ್ಯೆ ಬಗೆಹರಿಯುತ್ತೆ. ನಿಂಗೆ ನಡೆಯೋ ಅಭ್ಯಾಸ ಇಲ್ಲವೇ ಇಲ್ಲ.... ಕಾರಿನಲ್ಲಿ ಹೋಗೋನು ಸಾಯಕಲ್ ಮೇಲೆ ಹೋಗಬೇಕು. ಸಾಯಕಲ್ ಕೊಳ್ಳೋ ಯೋಗ್ಯತೆ ಇರೋನೂ ಬಸ್ಸಿನಲ್ಲಿ ಹೋಗಬೇಕು. ಬಸ್ಸಿನಲ್ಲಿ ಹೋಗೋ ಯೋಗ್ಯತೆ ಇದ್ದವನು, ನಡೆದು ಹೋದರೇ ಜಾಣ. ದಿನಾಲು ನಡೆದು ಹೋಗೋ ಅಭ್ಯಾಸ ಮಾಡು. ನಡೆಯುವವನ ಭಾಗ್ಯ, ನಡೀತಾ ಇರುತ್ತೆ!" ಎಂದು ನನಗೆ ಮಾತ್ರ ಮೀಸಲಾಗಿರುತ್ತಿದ್ದ ಉಪದೇಶಾಮೃತವನ್ನು ಮಗನ ಮೇಲೂ ಕರೆದರು.

ವಿಕಾಸ, ಪಟಬಿಡದೇ ಸ್ಕೂಟರ್ ಬೇಡಿಕೆ ಮುಂದುವರಿಸಿದ. ಮೂರನೆಯ ಸೆಮೆಸ್ಟರ್ ಹೊತ್ತಿಗೆ ಸ್ಕೂಟರ್‌ನಿಂದ ಸಾಯ್‌ಕಲ್‌ಗೆ ತಂದೆಯನ್ನು ಒಪ್ಪಿಸೋದರಲ್ಲಿ ಯಶಸ್ವಿಯಾದ.

"ಗಟ್ಟಿಮುಟ್ಟಾದ ಬೈಸಿಕಲ್ ತೊಗೋ. ಆಡಂಬರಕ್ಕೆ ಮರುಳಾಗಬೇಡ. ನಿನ್ನ ಬೋರ್ಡ್ರು, ಇತರ ಸಲಕರಣೆಗಳನ್ನು ಸಲೀಸಾಗಿ ಒಯ್ಯುವಂತಿರಬೇಕು. ನಿನ್ನಮ್ಮ ನಾನು ಹಿಂದಿನ ಸವಾರಿ ಮಾಡಿದರೂ ಬೈಸಿಕಲ್ ಮುಗ್ಗರಿಸಬಾರದು!" ಎಂದೆಲ್ಲ ಇವರು ಮುಂಜಾಗ್ರತೆ ಹೇಳಿದರು.

ಆದರೆ, ಮನೆಗೆ ಬಂದ ಸಾಯ್‌ಕಲ್, ಅತ್ಯಾಧುನಿಕ ಮಾದರಿಯ 'ಜಪಾನಿ' (ಇಮಿಟೇಶನ್) ಕ್ರೀಡಾ ಬೈಸಿಕಲ್ ಆಗಿತ್ತು. ಥಳಥಳಿಸುವ ಕಿತ್ತಳೆ ಬಣ್ಣ. ಲತಾಂಗಿಯನ್ನು ನೆನಪಿಸುವ ಬಳುಕಿಬಾಗುವ ನಡು. ಭರತ ನಾಟ್ಯಂ ನಟಿಯಂತೆ ಅಲುಗಾಡುತ್ತಲೇ ಇರುವ ಗೋಣನ್ನು ನೆನಪಿಗೆ ತರುವ ಹ್ಯಾಂಡಲ್ ಬಾರು. ಬೆರಳು ಹತ್ತಿದರೂ ಕುಣಿದು ಕುಪ್ಪಳಿಸುವ ಹ್ಯಾಂಡಲ್‌ಗೆ ನಾಜೂಕಾಗಿ ಕಟ್ಟಿದ ರೇಶ್ಮೆಗೊಂಡೆಗಳು. ನೋಡಲು ಸಾಕ್ಷಾತ್ ತನ್ವಂಗಿಯೇ!

"ಅಮ್ಮ, ಬೈಸಿಕಲ್‌ಗೆ ಒಳ್ಳೇ ಹೆಸರಿಡಬೇಕು. ಶೀಘ್ರವೇಗವನ್ನು ಸೂಚಿಸುವ ಹೆಸರು ಹೇಳು " ಎಂದು ವಿಕಾಸ ಕೇಳಿಕೊಂಡ.

'ಪವಾಮಪಲ್, ಪವಾಜಪಾಜ್'?

"ಬೇಡ, ಅದು ಗತಿಯನ್ನು ಸೂಚಿಸುವುದಿಲ್ಲ. ಅಲ್ಲದೇ ಒಂದೀ ಬೇಡ. ಕನ್ನಡ ಪೆಸರು ಬೇಕು" ಎಂದ.

ಅಮಿತಗತಿ, ಮನೋವೇಗ, ಪವಸ್‌ವೇಗ ಎಂದೆಲ್ಲಾ ಹೇಳಿದೆ. ಅವನ್ನೆಲ್ಲ ಕರಿಣವೆಂದ. 'ಪನುಮಾನ್'? ಕೊನೆಗೆ ತಾನೇ ಅದನ್ನು 'ಮಾರುತಿ' ಎಂದು ಪೆಸರಿಸಿದ. ಈಗಾಗಲೇ ಕಾರೊಂದಕ್ಕೆ ಆ ಹೆಸರಿದೆಯಲ್ಲಪ್ಪ? ಎಂದರೆ ಬೈಸಿಕಲ್‌ಗೆ ಇಲ್ಲವಲ್ಲ? ಎಂದು ಮನದಟ್ಟುಮಾಡಿದ. ಮರುದಿನವೇ ಕೆಂಪು ರಟ್ಟಿನಿಂದ ಮಾರುತಿಗೊಂದು ಮುಖವಾಡ ಮಾಡಿಸಿ ಸಾಯಕಲ್ ಮುಖಕ್ಕೆ ಬಿಗಿದ. ಮೈಸೂರು ರಸ್ತೆಯಲ್ಲಿ ಒಮ್ಮೆ ಪೆಡಲ್ ಮಾಡಿ ಹಾಯಬಿಟ್ಟನೆಂದರೆ ಅವನ ಕಾಲೇಜ ಎದುರಿಗೇ ನಿಂತು ಬಿಡುತ್ತಿತ್ತಂತೆ ಮಾರುತಿ. ಅಲ್ಲದೇ ಅವನಿಗೆ ಪಸಿವಾದಾಗ ಹೋಟೇಲ್, ಬಾಯೊಣಗಿದಾಗ ಕೆಫಿಟೇರಿಯಾ, ಜ್ಯೂಸ್ ಸೆಂಟರ್ ಪತ್ತಿರ ವೇಗ ತಗ್ಗಿಸಿ ಬಿಡುವದು ಕ್ರಮೇಣ ಮಾರುತಿಗೆ ರೂಢಿಯಾಯಿತು. ಬಿಸಿ ನಿಪ್ಪಟ್ಟಿನ ಅಂಗಡಿಯೆದುರು ಥಟ್ಟನೇ ನಿಲ್ಲುವದು. ಎರಡನೇ ಪೋಗೆ ಹೋಗುವಾಗ ಸದ್ದುಮಾಡದೇ ತನ್ನ ಸೂಕ್ಷ್ಮ ಗಮನದ ಮಧುರನಾದದಿಂದಲೇ ಗೇಟಿನಾಚೆ ನಿಂತ ವಿಕಾಸನ ಗೆಳೆಯನನ್ನು ಪಿಸುನಾದದಿಂದಲೇ ಕರೆಯುವಷ್ಟು ನೈಪುಣ್ಯವನ್ನು ಮಾರುತಿ ಒಂದು ವಾರದಲ್ಲೇ ಪಡೆದಿತ್ತು. ಕಳ್ಳ ಬೆಕ್ಕಿನ ಹೆಜ್ಜೆ, ಚಿಗರೆಯೋಟ, ಹಾವಿನ ಪರಿದಾಟ, ಕಪ್ಪೆಯ ಕುಪ್ಪಳಿಸುವಿಕೆಗಳೆಲ್ಲೆಲ್ಲ ಮಾರುತಿ ಮಿಗಿಲೆನಿಸಿತು.

ಮಾರುತಿಯು ಆಗಮನದಿಂದ ವಿಕಾಸನ ತಿರುಗಾಟದ ತೀಟೆಗೆ ಹೊಸ ಆಯಾಮ ಬಂದಂತಾಯಿತು. ಹಗಲಿರುಳುಗಳ ತಾರತಮ್ಯವಿಲ್ಲದೇ ಅವನ ಸೇವೆಗೆ ಅದು ಟೊಂಕಕಟ್ಟಿ ನಿಂತಿತ್ತು.

"ಸ್ವಲ್ಪ ಗೋಧಿ, ಗಿರಣಿಗೆ ಹಾಕಿಸ್ಕೊಂಡು ಬಾರೋ!" ಎಂದರೆ 'ಅಮ್ಮ ಇದು ಕ್ರೀಡಾ ಸಾಯಕಲ್, ಐದು ಕೆ.ಜಿ. ಪೋರುವ ತ್ರಾಣ ಅದಕ್ಕಿಲ್ಲ. ನೀನೂ ಪೊತ್ತು ದಣಿಯುವದು ಬೇಡ. ಆಟೋ ಮಾಡಿಕೊಂಡು ಹೋಗಿ ಬಂದರೆ ನಿನಗೂ ಆರಾಮು, ಮಾರುತಿಗೂ ಆರಾಮು' ಎಂದು ಸ್ವತಃ ಮಾರುತೀಪೀಠಸ್ಥನಾಗಿ ಹೊರಟೇ ಬಿಡುವ. ಇನ್ನು ಡಬಲ್ ರೈಯ್ಡ್ ಮಾಡುವದಾಗಲಿ, ಸಾಮಾನು ಸರಂಜಾಮು ಪೊರುವ ಗೋಜೇ ಇರಲಿಲ್ಲ. ಅದಕ್ಕೆ ಬ್ಯಾಕ್‌ಸ್ಟ್ಯಾಂಡ್ ಇರಲಿಲ್ಲವಲ್ಲ?

"ಮಾರುತಿಯ ಆರೋಗ್ಯದ ದೃಷ್ಟಿಯಿಂದ ನೀನು ಅಷ್ಟ ಬರಬೇಡ ಜೋಕೆ!" ವಿಕಾಸನು ಸುಯ್ಯೆಂದು ಸಾಯಕಲ್ ತರುತ್ತಿದ್ದಂತೆ ಯಜಮಾನರು ಎಚ್ಚರಿಸಿದರು. ಅದರೂ ಕ್ಷಣದಲ್ಲಿ ಕಾಂಪೌಂಡಿನ ಒಂದು ಬದಿಗೆ ತಲೆ ಕೂದಲು ಒಣಗಿಸಿಕೊಳ್ಳುತ್ತ ನಿಂತ ನನಗೆ ಚಕ್ರ ಬಡಿದು ಅದರ ನಾಲ್ಕು ಹಲ್ಲು ಮುರಿದು ಬಿದ್ದವು"ನೋಡಿದೆಯಾ? ಕ್ರೀಡಾ ಸಾಯಕಲ್ ವೇಗಕ್ಕೆ ಪೆಸರಾದರೂ ಅಡ್ಡಾದಿಡ್ಡಿ ಬೆಳೆದ ಮನುಷ್ಯರ ಬಡಿತದ ಏಟು ತಡೆದುಕೊಳ್ಳಲಿಕ್ಕೆ ಅದಕ್ಕೆ ತ್ರಾಣವಿಲ್ಲ. ಹೀಗೆ ಇನ್ನೆರಡು ಬಾರಿ ನೀನು ಬಂದು ಬಡಿದರೆ.........."

'ಮಾರುತಿಯ ಅವಸ್ಥೆ ಮುಗಿದಂತೆಯೇ!' ತಂದೆ-ಮಗ ಕೂಡಿಯೇ ಎಚ್ಚರಿಸಿದರು.

ತಿಂಗಳೊಪ್ಪತ್ತಿನಲ್ಲಿ ಟಾಯರ್ ಬದಲಾಯಿಸಬೇಕಾಯಿತು. ಮೈಸೂರಿನ ರಸ್ತೆಗಳೆಲ್ಲ ವಳ್ಳಿಗಾಡಿನ ಕಾಲ್ದಾರಿಗಳಿಗಿಂತ ಕಳಪೆ! ನ್ಯೂಯಾರ್ಕ್, ಟೋಕ್ಯೊಗಳಲ್ಲಿ ಹಾರಾಡುವ ಮಾರುತಿ ಇಲ್ಲಿ ಹೇಗೆ ತಾನೇ ಹೊಂದಿಕೊಂಡಾನು? ಮರುಕದಿಂದ ಮಾರುತಿಗೆ ಬೇಕಾದ ಮರಮ್ಮತ್ (ರಿಪೇರಿ) ವಿಕಾಸ ಮಾಡಿಸಿದ.

ಮಳೆಗಾಲ ಕಳೆಯುವದರೊಳಗೆ ಮಾರುತಿಯ ಒಳಭಾಗದಲ್ಲಿ ಜಂಗು ಕಾಣಿಸಿಕೊಂಡಿತು.

ಮಲೆನಾಡಿನ ಆರ್ದ್ರತೆ ಮಾರುತಿಗೆ ಒಗ್ಗುವುದಿಲ್ಲ. ಟೋಕ್ಯೊ-ಬೊಂಬಾಯಿ ರಸ್ತೆಗೆ ಹೇಳಿ ಮಾಡಿಸಿದ್ದಲ್ಲವೇ? ಎಂದು ಕೊಂಕು ನುಡಿದರೂ ತಿರುಗಿ ರಿಪೇರಿಗೆ ಕಾಸು ತರದೇ ನಿರ್ವಾಹವಿರಲಿಲ್ಲ.

ಎರಡು ವಾರಗಳ ನಂತರ ಸೀಟ್ ಬದಲಾಯಿಸಬೇಕಾಯಿತು. ಕಾರಣ, ವಿಕಾಸನ ಗೆಳೆಯ 'ಜಂಬೋ' ಮರೆತು ಬಂದ ನೋಟ್ಸ್ ತರಲು ಮಾರುತಿಯನ್ನೇರಿ ಹಾಸ್ಟೇಲಿಗೆ ಹೋಗಿ ಬಂದದ್ದೇ ಆಗಿತ್ತು. "ಪಾಪ! ಸಣ್ಣ ತೂಕದ್ದೇ ರೂಢಿಯಾದ ಮಾರುತಿ, ಜಂಬೋನ ಎಪ್ಪತ್ತೆರಡು ಕೇಜಿ ಹೇಗೆ ತಡೆದುಕೊಂಡಾನು!" ಎಂದು ತಿರುಗಿ ಹೊಸ ಆಸನವನ್ನು ವಿಕಾಸ್ ಹಾಕಿಸಿದ. ದಿನ ಹೋದಂತೆ, ಮಾರುತಿಯು ಹಲವಾರು ಕಾಯಿಲೆಗಳು ಕಾಣಿಸಿಕೊಂಡವು. ಪಂಕ್ಚರ್, ಹಲ್ಲು ಮುರಿತ, ಹಾಂಡಲ್ ಕುಸಿತ, ಓಂಗಾಲ ಹೊಡೆತ, ಗೋಣುಬಿರಿತ, ಒಂದೇ ಎರಡೇ!

ಆರು ತಿಂಗಳಲ್ಲಿ ರಿಪೇರಿ ಖರ್ಚು, ಕೊಂಡ ವೆಚ್ಚಕ್ಕಿಂತ ಇಮ್ಮಡಿಯಾಯ್ತು.

"ಮಾರಿಬಿಡೋ, ಗಟ್ಟಿಮುಟ್ಟಾದ ಬೈಸಿಕಲ್ ಕೊಳ್ಳೆಂದರೆ, ಈ ಲಿಡಬಿಡಕಿ ಆಟಿಗೆ ತಂದೆ. ಇನ್ನು ರಿಪೇರಿಗೆ ಹಣ ಕೊಡೋಲ್ಲ"! ಗದರಿಕೊಂಡೆ.

"ಮಾರಿಬಿಡ್ತೀನೆ ನೀನು ಹೇಳಿದಂತೆ, ಆದರೆ ಹಳೇದಾಗಿ ಕಂಡ್ರೆ ಯಾರೂ ಕೊಳ್ಳೋಲ್ಲ. ರಿಪೇರಿ ಮಾಡಿಸ್ತೀನಿ. ಪೇಂಟ್ ಮಾಡಿಸ್ತೀನಿ, ನಂತರ ಮಾರ್ತೀನಿ" ಮಾರುತಿಯ ಘನತೆಗೆ ಅನ್ಯಾಯವಾಗದಂತೆ ವಿಕಾಸ್ ನೋಡಿಕೊಂಡ.

ಈಗ ಕೆಂಬಣ್ಣ ತಾಳಿದ ಮಾರುತಿ ಮುಸುಡಿಗೆ ನೀಲಿಬಣ್ಣ. ಕಿರೀಟಕ್ಕೆ ಕುಚ್ಚು ಹೂ, ಕೊರಳಿಗೆ ಪಳ ಪಳ ಹಾರ ಹಾಕಿದ್ದರಿಂದ ಹಿರಿ-ಕಿರಿಯರೆಲ್ಲ ಕಣ್ಣು ಬಿಟ್ಟು ನೋಡುವವರೇ! ಆದರೆ ಕೊಳ್ಳಲು ಯಾರೂ ಬರಲಿಲ್ಲ. ಗೆಳೆಯ ವಾಸುಗೆ ದಂರೋಟು-ದೋಸೆ-ಕಾಫಿ ಕೊಡಿಸಿ ಮಾರಲು ಯತ್ನಿಸಿದ. ಡಬಲ್‌ರೈಡ್ ಮಾಡಿಸಿ ಮನೆತನಕ ಕರೆಕೊಯ್ದು ಬಿಟ್ಟಾಗ, 'ಇನ್ನೊಮ್ಮೆ ಭೇಟಿ ಮಾಡುತ್ತೇನೆ' ಎಂದಾತ ತಿರುಗಿ ಮುಖ ತೋರಿಸಲಿಲ್ಲ.

ಸಹಪಾಠಿ ಮಬೆ ಬಂದು, ಮಾರುತಿ ಡುಬ್ಬ ಚಪ್ಪರಿಸಿ, ಗೋಣು ತಿರುಗಿಸಿ ವಾಹವ್ವಾ! ಎಂದರೂ, ಅರ್ಧ ಬೆಲೆಗೆ ಕೊಡುತ್ತೇನೆಂದಾಗ ಬೇಡವೆಂದ.

ಮೈಸೂರ್‌ಪಾಕ್, ಬೋಂಡ ಆತಿಥ್ಯ ಪಡೆದ ಮೂರ್ತಿ, ಸಾಯಕಲ್ ಈಗ ಕೊಟ್ಟಿರು, ಕಂತಿನ ಮೇಲೆ ಮುಂದಿನ ವರ್ಷ ಮುಟ್ಟಿಸ್ತೀನಿ ಎಂದಾಗ ಒಂದೆ ಮುಂದೆ ನೋಡಿದ ವಿಕಾಸ. ನಂತರ ಪರಿತಪಿಸಿದ. ಕೊಟ್ಟೇಬಿಟ್ಟರೆ ಸೆಟ್ಟಗಿತ್ತು ಎಂದು.

ಮಾರುತಿ, ಇನ್ನೆರಡು ಅಪಘಾತಕ್ಕೆ ತುತ್ತಾಗಿ, ರಿಪೇರಿ ಹೊಂದಿ ನುಗ್ಗಾಗಿತ್ತು. ಕೊನೆಗೆ ಬಂದಷ್ಟು ಬೆಲೆ ಬರಲಿ, ಎಂದು ಗುಜರಿಗೆ ಒಯ್ದು ವಿಕಾಸ.

ಗುಜರಿ ಮಾಲಿಕ, ಅರ್ಧಗಂಟೆ ಕಾಯಿಸಿ, ಎಡಗೈಯಿಂದ ಮಾರುತಿಯ ಹಿಂಭಾಗಕ್ಕೆ ಬಡಿದ. ಅದರ ಮುಂಭಾಗ ಮುರಿದುಕೊಂಡೇ ನಿಂತಿತು. ''ಹೋಗಲಿ, ಐವತ್ತು ಕೊಡಿ!'' ಎಂದ.

ನೂರು ರೂಪಾಯಿ ನಿರೀಕ್ಷಿಸಿದ ವಿಕಾಸ, ಭೂಮಿಗೆ ಇಳಿದು ಹೋದ. ನಾನೇ ಕೊಡಬೇಕೇ? ಎಂದ.

''ನೋಡಿ ಸ್ವಾಮಿ!ಇದೆಲ್ಲಾ ಹಳೇ ಕಮಾಲು, ಒಂದೊಂದು ಪಾಲ್ಟು ತೆಗೆದು ಮಾರಿದರೂ ನಾಲ್ಕಾಣೆ-ಎಂಟಾಣೆ ಗಿಟ್ಟೊಲ್ಲ. ಅಲ್ದೇ ಇದನ್ನು ಮಡಗಿಕೊಂಡಿದ್ದಕ್ಕೆ ಬಾಡಿಗೆ ಬೇರೆ ಕೊಡಬೇಕು. ಬೇಕಾದರೆ ಐವತ್ತು ಮಡಗಿ'' ಗುಜರಿರಾಯ ಗುಡುಗಿದ.

ಮಗರಾಯ ನಿರ್ವಾಹವಿಲ್ಲದೇ ಸಾಯ್‌ಕಲ್ ತಳ್ಳಿಕೊಂಡು ಮನೆಗೆ ಬಂದ.

ಇಕ್ಕಟ್ಟಾದ ಮನೆ ಬಾಲ್ಕನಿಯಲ್ಲಿ ಮೂಲೆಯಲ್ಲಿ ಬಿಕೋ! ಎಂದು ನಿಂತುಕೊಂಡ ಬೈಸಿಕಲ್ಲಿನಿಂದ ಎಲ್ಲರಿಗೂ ತೊಂದರೆಯೇ. ದಿನಾಲೂ ಬೈಸಿಕೊಂಡು ಕೊನೆಗೊಮ್ಮೆ ಚಿರಂಜೀವ ಕೇಳಿದ. 'ಅಮ್ಮ ಇದನ್ನ ಹಾಗೇ ಕೊಡಲಿಕ್ಕೆ ತಯ್ಯಾರ್! ಏನು ಮಾಡಲಿ?''

''ಅದಕಕ್ಯಾಕೋ ಇಷ್ಟು ತಲೆ ಕೆಡಿಸಿಕೊಳ್ತಾ ಇದ್ದಿ? ರಾತ್ರೆ ಗೇಟ ಹೊರಗಿಡು. ಬೆಳಗಾಗೋದರೊಳಗೆ ಇರಲ್ಲ''

ಈ ಉಪಾಯವೂ ಫಲಿಸಲಿಲ್ಲ. ಯಾರೂ ಅದನ್ನು ಒಯ್ಯಲಿಲ್ಲ. ಮಾರುತಿ, ಮಾನ ಕಳೆದುಕೊಳ್ಳದೇ ವಿಕಾಸನ ಕೋಣೆಗೆ ಕಾವಲು ನಿಂತಿದ್ದ.

ಕೊನೆಗೊಮ್ಮೆ ನಮ್ಮ ಕುಮಾರರಾಮ, ಮಧ್ಯರಾತ್ರಿ ಮಾರುತಿಯನ್ನ ಹೆಗಲಮೇಲೆ ಹೊತ್ತು ಮನೆ ಪಕ್ಕದ ಕೆರೆಗೆ ಹಾಕಲೆಂದು ಹೋದ. ರಾತ್ರೆ ಬೀಟಿನ ಪೋಲಿಸನಿಂದ ಮನಸಾರೆ ಬೈಸಿಕೊಂಡು, ''ಇನ್ನೊಮ್ಮೆ ಕಳ್ತನಾ ಮಾಡೊಲ್ಲ ಕಣಣ್ಣಾ!' ಎಂದು ಯಾಚಿಸಿ ಎರಡು ರೂಪಾಯಿ ಜೊತೆಗೆ ಮಾರುತಿಯನ್ನೂ ಅವನಿಗೊಪ್ಪಿಸಿ ನಿಶ್ಚಿಂತೆಯಿಂದ ಮರಳಿದ.

ವಿಕಾಸನು, ಈಗ ಮನೆಯಿಂದ ಏಳೇ ನಿಮಿಷದ ದಾರಿಯ ಆಫೀಸಿಗೆ ಸ್ಕೂಟರ್ ಓಡಿಸುತ್ತಿದ್ದಾನೆ. ಈ 'ಮಾರುತಿ'ಯ ಇಂಧನ-ದಕ್ಷತೆ (ಫ್ಯುಯೆಲ್ ಎಫಿಶನ್ಸಿ) ಲೀಟರಿಗೆ ಇಪ್ಪತ್ತು ಕಿಲೋಮೀಟರ್, ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ.

# ಗಾಡಿ ಲೋನ್

–ಕೆ.ಎಸ್. ಶ್ರೀಕಂಠಯ್ಯ

ಪೇಪರ್‌ನಲ್ಲಿ ಓದಿದ್ದೆವು, ಜನಗಳ ಬಾಯಲ್ಲಿ ಕೇಳಿದ್ದೆವು, ತೆಗೆದುಕೊಂಡವರು ಹೆಮ್ಮೆಯಿಂದ ತಿರುಗಾಡಿದ್ದನ್ನ ನೋಡಿದ್ದೆವು. ಇಷ್ಟುಬೇಗ ಈ ಸುಯೋಗ ನಮಗೆ ನಮ್ಮ ಊರಿನಲ್ಲೇ ಲಭ್ಯವಾಗಬಹುದಂತ ಊಹಿಸಿರಲಿಲ್ಲ. "ಗಾಳಿ ಬಂದಾಗ ತೂರಿಕೊ" ಮಾತು ನೆನಪಿಗೆ ಬಂತು. ಹದಿನೆಂಟಕ್ಕೆ ಕ್ಯಾಂಪು ಕೋಟೆ ಆಂಜನೇಯ ಸ್ವಾಮಿಗೆ ಹಣ್ಣು ಕಾಯಿ ಮಾಡಿಸಿದೆ.

ಮಂಜಣ್ಣನ ಮನೆಗೆ ಹೋದೆ. ಅವನೊಬ್ಬ ಪುಡಾರಿ. ನನ್ನ ತರಹದವರೇ ನಾಲ್ಕಾರು ಜನ ಬಂದಿದ್ದರು. ಒಬ್ಬೊಬ್ಬರಿಗೂ ಒಂದೊಂದು ಸ್ಕೀಮು, ಒಂದೊಂದು ಪ್ಲಾನು ಹಾಕಿ ಕಳುಹಿಸಿ ಕೊಟ್ಟ. ಲೋನ್ ಹಣವೇ ಕೈಗೆ ಬಂದ ತೃಪ್ತಿಯಿಂದ ಹಿಂದಿರುಗಿದ್ದರು.

ನಮಸ್ಕಾರ ಅಂದೆ. "ನೋಡು ಸೀತಾರಾಮು ಎಲ್ಲರೂ ವೆಟ್‌ಗ್ರೈಂಡರು, ಡ್ರೈ ಕ್ಲೀನರು, ನಿಟ್ಟಿಂಗ್ ಮೆಶೀನು ಅಂತ ಕೂರಬಾರದು. ಒಂದೇ ಊರಲ್ಲಿ ನಲವತ್ತೇಳು ವೆಟ್‌ಗ್ರೈಡರ್‌ನಲ್ಲಿ ಏನು ರುಬ್ತೀರಿ ಅಂತ ಕೇಳಿ ಬಿಟ್ಟರೆ ಉತ್ತರವೇ ಇರೊಲ್ಲ. ಈಗ ನೋಡು ಹದಿನೆಂಟನೇ ತಾರೀಕು ಲೋನ್ ಕ್ಯಾಂಪಿಗೆ ಹದಿನೇಳು ವೆಟ್ ಗ್ರೈಂಡರು, ಆರು ಹೊಲಿಗೆ ಮಿಶನ್ನು, ಹದಿನೆಂಟು ಆಟೋ, ಆರು ಟೆಂಪೊ, ಎರಡು ಗಾಡಿ, ಮೂರು ಸೈಕಲ್ ಶಾಪ್ಪು, ನಾಕು ಶೇವಿಂಗ್ ಸೆಲೂನು–ಬಂದಿದೆ. ಬಾಕಿ ಇರೋದು ನಾಕು ಗಾಡಿ ಎರಡು ಡ್ರೈರೀ ಫಾರಂ, ಒಂದು ಕೋಳಿ ಫಾರಂ ಬಾಕಿ ಇದೆ. ನೀನು ಒಂದು ಕುದುರೆ ಗಾಡಿಗೆ ಅರ್ಜಿ ಹಾಕು. ಮುಂದಿನದು ನನಗಿರಲಿ" ಅಂದ.

"ನೋಡು ಮಂಜಣ್ಣ, ಹತ್ತು ಸಾವಿರ ಸಿಕ್ಕಿದರೆ ಅವಲಕ್ಕಿಸರ, ಬೆಳ್ಳಿ ತಟ್ಟೆ, ಚಂಬು, ಸಿಂಗರ್ ಮಿಶನ್ ಬಿಡಿಸಿಕೊಳ್ಳಬಹುದು ಅಂತ ಮಾಡಿದ್ದೆ. ಈಗ ನೀನು ಹೇಳುವ ಪ್ರಕಾರ ಗಾಡಿ ಅಂತ ಬರೆದರೆ ನನ್ನ ಗತಿ?"

"ನೋಡು ಸೀತಾರಾಮು ಈ ಅಗ್ರಹಾರದವರೇ ಹೀಗೆ. ಇದು ಅನ್ನ. ಇದನ್ನ ತಿನ್ನಿ ಅಂದರೆ ಮಣ್ಣಿಗೇ ಬಾಯಿ ಹಾಕ್ತೀರಿ. ಅದೇ ಬೇಜಾರು. ಗಾಡೀಗೆ ಅಂತ ಬರಿ. ಕೊಳೆ ಪೈಜಾಮ, ದೊಗಲೆ ಶರಟು, ತಲೆಗೆ ಮಫ್ಲರು. ಸಲಾಂ ಮಾಡಿ ಅರ್ಜಿಕೊಡು. ನಾನಿದೀನಿ" ಅಂದ.

ಇನ್ನು ಮಾತಾಡಿದರೆ ರೇಗ್ತಾನೆ ಅಂತ ಹುಂ ಅಂದುಕೊಂಡು ಮನೆಗೆ ಬಂದೆ.

ಆ ಹದಿನೆಂಟೂ ಬಂದೇ ಬಂತು. ವೀರಭದ್ರ ಕಲ್ಯಾಣ ಮಂಟಪದಲ್ಲಿ ಲೋನ್ ಮೇಳ. ಹೋಗಿ ನೋಡಿದರೆ ಎರಡು ಜಾತ್ರೆ ಜನ. ಮಂಜಣ್ಣನ್ನ ಕಂಡೆ. ಯಾರಿಗೋ ಸಲಾಂ ಮಾಡಿಸಿ ಅರ್ಜಿ ಕೊಡಿಸಿ ಅಲ್ಲಿ ನಿಲ್ಲು ಅಂದ. ನಿಂತೆ.

ಮಂಜಣ್ಣ ಬುದ್ಧಿವಂತ. ಎಲ್ಲವನ್ನೂ ಸರಿಯಾಗಿ ವ್ಯವಸ್ಥೆ ಮಾಡಿದ್ದ. ಅರ್ಧ ಘಂಟೆಯೊಳಗೆ ಕೈಗೆ ಹಣ ಬಂತು.

"ಗೋಘಾಭೀ ಗಾಡೀ ಭೀ ಪಚ್ಚೀಸ್ ತಾರೀಖ್ ಕು ದಿಯಾಸಾ" ಅಂದರು. ಸಲಾಂ ಮಾಡಿ ಬಂದೆ.

ಮಂಜಣ್ಣ ಹೇಳಿದ್ದ ಅಂತ ಖಲಂದರ್ ಸಾಹೇಬರು ತಮ್ಮ ಗಾಡಿ ಕುದುರೇನ ನಮ್ಮ ಮನೆ ಮುಂದೆ ನಿಲ್ಲಿಸಿ

"ಏಕ್ ಹಫ್ತ ಛೋಡ್ಕೋ ಆತು"

ಅಂತ ಹೇಳಿ ನಡೀತಿದ್ರು.

ನನ್ನದು ವಠಾರದ ಮನೆ. ಹದಿನೆಂಟು ಮನೆಗಳು. ನಮ್ಮ ಮನೆ ಮುಂದಿನಿಂದಲೇ ಓಡಾಡಬೇಕು. ಗಾಡೀನ ಹೊರಗೆ ನಿಲ್ಲಿಸಿ ಕುದುರೇನ ಮನೆ ಮುಂಭಾಗದಲ್ಲಿ ಕಟ್ಟುವ ಏರ್ಪಾಡು ಮಾಡಿದೆ. ಇವತ್ತು ಬರಬಹುದು, ನಾಳೆ ಬರಬಹುದು ಅಂತ ಕಾದೆ. ಬರಲಿಲ್ಲ. ಗಾಡೀದು ಪರವಾಗಿಲ್ಲ. ಕುದುರೆ ಆರೈಕೆ ನನ್ನ ಪ್ರಾಣ ತಿಂದುಬಿಡ್ತು. ಮೂರು ಮೂರು ಬಕೆಟ್ ಗಂಜಳ, ನಾಕು ನಾಕು ಮರ ಲದ್ದಿ ಹೊತ್ತು ಹೊತ್ತು ಸುಸ್ತಾದೆ.

ಆ ದಿನ ಶನಿವಾರ, ಒಳಗೇ ಕಟ್ಟಿ ಕುದುರೇಗೂ ಕೋಪ ಬಂದಿರಬೇಕು. ನಮಗೆ ಹೊಳೀಲಿಲ್ಲ. ಮನೆ ಓನರ್ ಅಜ್ಜಿ ಹೊಳೇಲಿ ಸ್ನಾನ ಮಾಡಿಕೊಂಡು "ಶಾಂತಾಕಾರಂ ಭುಜಗಶಯನಂ" ಹೇಳಿಕೊಂಡು ಒಂದು ತಂಬಿಗೆಯಲ್ಲಿ ನೀರು ಹಿಡಿದು ಬಂದರು. ಅಜ್ಞಾನದಲ್ಲಿ ಕುದುರೆ ತೀರ ಸಮೀಪ ಬಂದು ಬಿಟ್ಟರು. ಮೊದಲೇ ಸಿಟ್ಟು. ಯಾರೋ ಬಂದರು ಅಂತ ಝಾಡಿಸಿ ಒದ್ದು ಬಿಡ್ತು. "ಅಯ್ಯೋ ಚಂಡಾಲ" ಅಂತ ಹೋಗಿ ಲದ್ದೀ ಮೇಲೆ ಬಿದ್ದು ಬಿಟ್ಟರು. ವಿಜಯದ ಅಟ್ಟಹಾಸದಿಂದ ಕೆನೆದು ಕೇಕರಿಸಿತು ಕುದುರೆ. ಕೂಡಲೆ ಅಜ್ಜೀನ ಎಮರ್ಜೆನ್ಸಿ ವಾರ್ಡ್‌ಗೆ ಸೇರಿಸಿದೆವು. ಮೂಳೆ ಮುರಿದಿತ್ತು. ಹತ್ತು ದಿನ ಆಯ್ತು. ಆಕೆ ಬಿಲ್ ಮೂರು ಸಾವಿರ ಆಯ್ತು. ಖಲಂದರ್ ಒಂದು ಮುನ್ನೂರು ಕಿತ್ಕೊಂಡ. ಮಂಜಣ್ಣನಿಗೆ ಸಾವಿರ.

ಅವಲಕ್ಕಿ ಸರ ಮಾತ್ರ ಬಿಡಿಸಿಕೊಂಡೆ. ಮುಂದಿನ ಕ್ಯಾಂಪು ಎಲ್ಲೋ ಗೊತ್ತಾಗಿಲ್ಲ.

—o—

## ತರ್ಕ

ಕೌರವರ ತಪ್ಪಿಲ್ಲ
ಪಾಂಚಾಲಿಯಿಂದಲೆ
ಆದದ್ದು ವಸ್ತ್ರಾಪಹಾರ.
ಸೀರೆಯನ್ನಾಕೆ
ಉಟ್ಟಿದ್ದು ಏಕೆ?
ಇರಲಿಲ್ಲವೆ ಚೂಡಿದಾರ?

—ಎಚ್. ಡುಂಡಿರಾಜ್

# ಹಳೆ ಕಾರಿನ ಹೊಸ ಹಗರಣ

—ಎಸ್.ಎನ್. ಶಿವಸ್ವಾಮಿ

---

ನನ್ನಂಥ ಕಾರ್ಯಶೀಲ ಮನುಷ್ಯನಿಗೆ ಕಾರು ಇರಲೇಬೇಕೆನ್ನುವುದು ನಿರ್ವಿವಾದವಷ್ಟೆ! ನೋಡಿ, ಈ ಎರಡು ಚಕ್ರದ ವಾಹನಗಳು ನನ್ನ ಬೆಳೆಯುತ್ತಿರುವ ಕುಟುಂಬಕ್ಕೆ ಸರಿಹೊಂದುವುದೂ ಇಲ್ಲ, ಅವು ನನ್ನ ಜೀವನ ಶೈಲಿಯ ಗಾಂಭೀರ್ಯಕ್ಕೆ ಯೋಗ್ಯವೂ ಅಲ್ಲ. ಆದ್ದರಿಂದ ನನ್ನಲ್ಲಿ ಯಾವಾಗಲೂ ಸ್ವಂತ ಕಾರು ಇದ್ದೇ ಇದೆ. ಆದರೆ ಹೊಸದನ್ನು ಕೊಳ್ಳುವ ಶಕ್ತಿ ಮಾತ್ರ ಇಲ್ಲ. ಚೆನ್ನಾಗಿ ಖರ್ಚು ಮಾಡುವ ಪ್ರವೃತ್ತಿಯುಳ್ಳವನಾದ್ದರಿಂದ ಹೊಸ ಕಾರು ಕೊಳ್ಳಲು ಬೇಕಾದ ಹಣ ನನ್ನಲ್ಲಿ ಶೇಖರವಾಗುವ ಪ್ರಶ್ನೆಯೇ ಬರುವುದಿಲ್ಲ. ನನ್ನ ಕಾರು ಸೆಕೆಂಡ್ ಹ್ಯಾಂಡ್. ಅಥವಾ ಥರ್ಡ್, ಫೋರ್ತ್ ಹಾಂಡಿನದೇ ಆಗಿರಬೇಕಾದ್ದು ಅನ್ನುವುದರಲ್ಲಿ ಆಶ್ಚರ್ಯವೇನಿಲ್ಲ

ಹಳೇ ಕಾರು ಮಾಲೀಕರು ಎರಡು ಬಗೆಯವರಿರುತ್ತಾರೆ. ಒಂದು ಬಗೆಯವರು ಕಾರು ಕೊಂಡ ಮೇಲೆ ಅದೇ ಒಂದು ಕಾರಿನ ಭಕ್ತರಾಗಿ ಅದಕ್ಕೆ ಕೊನೆತನಕ ಅಂಟಿಕೊಂಡಿರುತ್ತಾರೆ. ಇಂಥ ಶ್ರದ್ಧಾವಂತ ಕಾರಿಗರು ತಮ್ಮ ಕಾರುಗಳ ಎಲ್ಲಾ ಕುಂದುಕೊರತೆಗಳನ್ನೂ ಗುರುತಿಸಿ ಅವುಗಳನ್ನು ಸರಿಮಾಡುವುದನ್ನು ಕಲಿತು ಸಿದ್ಧರಾಗುತ್ತಾರೆ. ಒಳ್ಳೆಯ ಕಾರ್ ತಜ್ಞರಾಗಿ ತಾವು ನಿದ್ರಿಸದಿರುವ ವೇಳೆಯನ್ನೆಲ್ಲ ಕಾರಿನ ಅಡಿಯಲ್ಲೇ ಕಳೆಯುತ್ತಾರೆ. ನನ್ನ ಮಿತ್ರರೊಬ್ಬರಿದ್ದಾರೆ. ಆತನ ಸಹಧರ್ಮಿಣಿ, ತಮ್ಮ ಪತಿ ಕಾರಿನ ಕೆಳಗೆ ನೆಲದ ಮೇಲೆ ಮಲಗಿ ಅಭ್ಯಾಸ ಮಾಡಿಕೊಂಡಿದ್ದು, ಹಾಸಿಗೆಯ ಮೇಲೆ ಮಲಗಿದರೆ ಆತನಿಗೆ ನಿದ್ದೆಯೇ ಬರುವುದಿಲ್ಲವೆಂದು ನನಗೆ ದೂರು ಹೇಳಿದರು. ಆತ ಒಂದು ಚಾಪೆ ಸುರುಳಿಯನ್ನು ಕಾರಿನಲ್ಲೇ ಇಟ್ಟಿದ್ದು, ಗಾಡಿಯಲ್ಲಿ ಕಿಂಚಿತ್ತಾದರೂ ಗಡಗಡ ಸದ್ದು ಕೇಳಿತೆಂದರೆ ಸಾಕು, ಚಾಪೆ ಹಾಸಿಕೊಂಡು ಕಾರಿನ ಕೆಳಗೆ ನುಸುಳಿ ಬಿಡುತ್ತಾರೆ.

ಎರಡನೇ ಬಗೆಯ ಹಳೆಯ ಕಾರು ಮಾಲೀಕರು ನನ್ನಂತಹವರು. ನಾನು ನನ್ನ ಕಾರುಗಳನ್ನು ಆಗಾಗ ಬದಲಾಯಿಸುತ್ತಲೇ ಇರಬೇಕು. ನಾನು ಮೊದಲು ಕಲಿತದ್ದು ಹಳೆಯ ಕಾರನ್ನು ಹೇಗೆ ಮಾರಾಟಮಾಡಬೇಕೆಂಬುದನ್ನೇ. ಆ ಮೇಲೆ ಅದನ್ನು ಓಡಿಸುವ ವಿದ್ಯೆ ಕಲಿತುಕೊಂಡದ್ದು. ಕಾರು ಕೊಂಡ ಕೂಡಲೇ ನಾನು ಅದಕ್ಕೆ ಝಗಝಗಿಸುವ ಹೊಸ ಬಣ್ಣದ ಹೊದಿಕೆ ಹಾಕಿಸಿಬಿಡುತ್ತೇನೆ. ಕೊಳ್ಳುವವರಿಗೆ ಅದು ತಕ್ಕಷ್ಟು ಆಕರ್ಷಣೀಯವಾಗಿ ಕಾಣುವುದುಮುಖ್ಯ. ನನಗೆ ಕಾರುಗಳ ಅಂತರ್ಯ, ಅವುಗಳ ರಿಪೇರಿ, ಏನೇನೂ ತಿಳಿಯದು. ಕಾರು ಕೊಳ್ಳುವಾಗ ನಾನು ತೆಗೆದುಕೊಳ್ಳುವ ಒಂದೇ ಮುನ್ನೆಚ್ಚರಿಕೆಯೆಂದರೆ ಅದರ ಮುಂಭಾಗದ ಮುಚ್ಚಳ ತೆರೆದು ಒಳಗೆ ಎಂಜಿನ್ ಇದೆಯೋ ಅಂತ ನಿಶ್ಚಯ ಮಾಡಿಕೊಳ್ಳುವುದಷ್ಟೇ. ರಿಪೇರಿ ಕೆಲಸಕ್ಕೆ ಮೆಕಾನಿಕ್ಕುಗಳೇ ಇದ್ದಾರಲ್ಲ! ನನಗೆ ಡಜನ್ ಗಟ್ಟಲೆ ಕಾರು ರಿಪೇರಿಯವರ ಪರಿಚಯ ಇದೆ. ಒಂದಲ್ಲ ಒಂದು ರಿಪೇರಿಗಾಗಿ ಅವರ ಬಳಿಗೆ ನಾನು ಪದೇ ಪದೇ ಹೋಗುತ್ತಿರುತ್ತೇನೆ. ಈ ಸಲ ಕ್ಲಚ್ ಪ್ಲೇಟ್, ಮಾರನೆಯ ಸಲ ಗೇರ್‌ಬಾಕ್ಸ್, ಇನ್ನೊಂದು ಸಲ ಬ್ರೇಕು, ಮತ್ತೊಂದು ಸಲ ಏಸಿ ಪಂಪ್, ಕಾರ್ಬುರೋಟರ್,

ಇಲ್ಲವೆ ಬ್ಯಾಟರಿ, ಫ್ಯಾನ್ ಬೆಲ್ಟ್, ರೇಡಿಯೇಟರ್, ಏನೂ ಇಲ್ಲದಿದ್ದರೆ ಕಾರು ಬಾಗಿಲ ಹಿಡಿ, ಬೀಗ- ಹೀಗೇ ಇವೆಲ್ಲದರ ಸರದಿ ಮುಗಿಯುವ ಹೊತ್ತಿಗೆ ಟೈರುಗಳು ತಕರಾರು ಮಾಡುತ್ತವೆ. ಎಷ್ಟಾದರೂ ಹಳೇ ಕಾರಿನ ಟೈರುಗಳು. ಕಾರುಗಳು ಹಳೆಯವೇ ಆಗಿರುವುದಲ್ಲದೆ ಒಳಗಿನ ಟ್ಯೂಬುಗಳೂ ಹಳೆಯವಾಗಿರುತ್ತವೆ. ಅವುಗಳು ಪಂಕ್ಚರಾಗುತ್ತಲೇ ಇರುತ್ತವೆ. ಒಂದು ಸಲ ನಾನು ಮೂರು ಪಂಕ್ಚರುಗಳನ್ನು ಒಂದೇ ಚಕ್ರದಲ್ಲಿ ರಿಪೇರಿ ಮಾಡಿಸಿ ನಗುತ್ತ ಮನೆಗೆ ಬಂದೆ. ಮಾರನೆಯ ಬೆಳಿಗ್ಗೆ, ನೋಡಿದರೆ ಟೈರು ಮತ್ತೆ ಯಥಾಪೂರ್ಣ ಚಪ್ಪಟೆ. ರಿಪೇರಿಗೆ ತೆಗೆದುಕೊಂಡು ಹೋದಾಗ ಯಾವ ಪಂಕ್ಚರೂ ಅಲ್ಲಿ ಕಾಣಲಿಲ್ಲ. ಟ್ಯೂಬು ಬಹಳ ಹಳೆಯದಾಗಿ ಹೋಗಿ ಗಾಳಿ ನಿಲ್ಲಿಸಿಕೊಳ್ಳುವ ಚೈತನ್ಯವನ್ನೇ ಕಳೆದುಕೊಂಡಿತ್ತು.

ನಾನು ಕಾರು ಮಾರ ಹೊರಟರೆ, ಅದರ ಸದ್ಗುಣಗಳನ್ನೆಲ್ಲ ಬಣ್ಣಬಣ್ಣವಾಗಿ ಬಣ್ಣಿಸಿ ಗಿರಾಕಿಗೆ ಬಾಯಲ್ಲಿ ನೀರೂರಿಸುತ್ತೇನೆ. ಒಂದು ಸಲ ಕಾರು ಕೊಳ್ಳ ಬಯಸಿ ಬಂದವನು ನನಗಿಂತ ಹೆಚ್ಚು ನುರಿತ ಹಳೆ ಕಾರಿನವನ ಹಾಗೆ ಕಂಡ. ನಮ್ಮ ಮಾತುಕತೆ ಹೆಚ್ಚು ಕಡಿಮೆ ಹೀಗೆ ನಡೆದಿತ್ತು.

ನಾನಂದೆ, "ನೋಡಿ ಸ್ವಾಮಿ, ಈ ಕಾರನ್ನ ನಾನು ಕೊಂಡು ಒಂದು ವರ್ಷ ಆಯ್ತು. ಇಲ್ಲೀವರೆಗೆ ಇದರ ರಿಪೇರಿಗೆ ನಾನು ಒಂದು ಪೈಸಾ ಕೂಡ ಕೊಟ್ಟಿಲ್ಲ"

ಅವನಿಂದ "ಅಯ್ಯೊ ಕೊಟ್ಬಿಡಿ ಪಾಪ, ವರ್ಕ್‌ಷಾಪಿನವನು ಅದೇ ಹೇಳೀದ. ಅವನೂ ಬಡವ"

ನಾನು ಇನ್ನೊಂದು ಪ್ರಯತ್ನ ಮಾಡಿದೆ. "ಎಷ್ಟು ಚೆನ್ನಾಗಿದೆ ಅಲ್ಲ? ಇದನ್ನ ನಾನು ಸೆಕೆಂಡ್ ಹ್ಯಾಂಡ್‌ಮಾರ್ಕೆಟಿನಲ್ಲಿ ಕೊಂಡುಕೊಂಡಿದ್ದು ಅಂತ ಹೇಳೋಕಾಗುತ್ತೆಯೆ?" ಅಂದೆ.

ಅವನಂದ "ಎಲ್ಲಾದರೂ ಉಂಟೆ? ನೀವಿದನ್ನ ಕೊಂಡುಕೊಂಡ್ರಿ ಅಂತಲೇ ನಾನು ಊಹಿಸಲಿಲ್ಲ. ನೀವೇ ಚೂರುಪಾರುಗಳನ್ನ ಸೇರಿಸಿ ಇದನ್ನ ಒಟ್ಟುಗೂಡಿಸಿದಿರಿ ಅಂದುಕೊಂಡೆ"

ನಾನು ಅಷ್ಟಕ್ಕೆ ಬಿಡಲಿಲ್ಲ. "ನಾನಿದನ್ನ ಅಡ್ವೊಕೇಟ್ ರಾಘವಾಚಾರಿಯವರ ಹತ್ರ ಕೊಂಡುಕೊಂಡೆ. ಇದನ್ನವರು ಹೊಸಹೊಸದಾಗಿ ಷೋರೂಮಿನಲ್ಲಿ ತಗೊಂಡು ಯಾರ ಕೈಗೂ ಕೊಡದೆ ತಾವೇ ಓಡಿಸಿದ್ದಾರೆ" ಅಂದೆ.

ಅದಕ್ಕೆ ಅವನಂದ "ಗೊತ್ತು, ಗೊತ್ತು. ರಾಘವಾಚಾರಿ ನನಗೆ ಗೊತ್ತು. ನಾನೇ ಅವನಿಗೆ ಈ ತರಕಲಾಂಟಿ ಗಾಡಿನ ಮಾರಿದವನು"

ಕೊನೆಗೆ ಅವನು ಆ ಕಾರನ್ನು ಕೊಂಡುಕೊಂಡ. ಏಕೆಂದರೆ ಅವನು ಅದು ಮಾಡಬಲ್ಲ ಎಲ್ಲಾ ತರದ ಚೇಷ್ಟೆಗಳನ್ನೂ ಬಲ್ಲ. ಅದರ ತಕರಾರುಗಳನ್ನೆಲ್ಲ ತಾನೇ ಸರಿಪಡಿಸಲು ಅವನು ಸಮರ್ಥನಾಗಿದ್ದ. ಉದಾಹರಣೆಗೆ, ಅದರ ಇಲೆಕ್ಟ್ರಿಕ್ ತಂತಿಗಳು ಬಹಳ ಗೋಜಿನ ಕೆಲಸ. ನನಗೇ ಅರ್ಥವಾಗಿಲ್ಲ. ಆದರೆ ಅವನಿಗೆ ಚೆನ್ನಾಗಿ ಗೊತ್ತಿರುವಂತಿತ್ತು. ಸ್ವಿಚ್ಚುಗಳಿಲ್ಲದೆ ತಂತಿಗಳು ಅಲ್ಲಲ್ಲಿ ತೂಗಾಡುತ್ತಿದ್ದವು. ಕಾರನ್ನು ಹೊರಡಿಸುವುದಕ್ಕೆ, ದೀಪಗಳನ್ನು ಹಚ್ಚುವುದಕ್ಕೆ, ಹಾರನ್ ಮಾಡಲಿಕ್ಕೆ ಈ ತೂಗುತ್ತಿರುವ ಒಂದಲ್ಲ ಒಂದು ತಂತಿಯನ್ನು ಇನ್ನೊಂದಕ್ಕೆ ಜೋಡಿಸಬೇಕು. ಒಂದು ಸಲ ತುಂಬಿದ ನೀರಿನಲ್ಲಿ ನಾನದನ್ನು ಓಡಿಸಿಕೊಂಡು (ಅಥವಾ ತೆವಳಿಸಿಕೊಂಡು, ಅನ್ನಿ) ಹೋದಾಗ ಹಾರನ್ ಮಾಡಲು ತಗುಲಿಸಬೇಕಾದ ತಂತಿ ಕೈಗೆ ಸಿಗಲಿಲ್ಲ.

ಹಾರನ್ ಮಾಡದೆಯೇ ನಿಧಾನವಾಗಿ ಸ್ವಲ್ಪ ದೂರ ಹೋದೆ. ಇದೇನೋ ಸರಿಯೆನ್ನಿ. ಆದರೆ ಮುಂದೆ ಒಂದು ರಸ್ತೆ ದಾಟುವ ಜಂಕ್ಷನ್ ಇತ್ತು. ಹಸಿರು ದೀಪ ಬರುವತನಕ ಅಲ್ಲಿ ನಾನು ಕಾರು ನಿಲ್ಲಿಸಿದೆ. ಹಸಿರು ದೀಪ ಬಂದಾಗ ಕಾರು ಹೊರಡಲಿಲ್ಲ. ಎರಡು ತಂತಿಗಳನ್ನು ಜೋಡಿಸಿದಾಗ ಕಾರು ಚಲಿಸಲಿಲ್ಲ. ಹಾರನ್ ಇದುವರೆಗೆ ಬಾಯಿಮುಚ್ಚಿಕೊಂಡಿದ್ದದು ಈಗ ಒಂದೇ ಸಮನೆ ಒದರಲಾರಂಭಿಸಿತು. ಸಂದರ್ಭ ಹೇಗಿತ್ತು, ಯೋಚಿಸಬಲ್ಲಿರಾ? ನನ್ನ ಹಿಂದುಗಡೆ ಹತ್ತಾರು ಕಾರುಗಳು ತಡೆಗಟ್ಟಿ ನಿಂತಿವೆ. ನನ್ನ ಕಾರಿನ ಹಾರನ್ ನಿಲ್ಲದೆ ಹೊಡೆದುಕೊಳ್ಳುತ್ತಿದೆ.

ಹಳೇ ಕಾರಿನ ಮಾಲೀಕನಾಗಿ ನಾನು ಕಲಿತ ಕೆಲವು ಗುಣಗಳ ಪೈಕಿ ಕಾಲ್ನಡಿಗೆಯ ಪ್ರಯಾಣಿಕರಿಗೆ ಕಂಡಕಡೆಯೆಲ್ಲ ಧಾರಾಳವಾಗಿ ಸವಾರಿಗೆ ಅವಕಾಶಕೊಡುವುದು ಮುಖ್ಯವಾಗಿತ್ತು. ಕಾರು ನಿಂತರೆ ಅವರು ಅದನ್ನು ರಸ್ತೆಯ ಬದಿಗೆ ಸರಿಸುವುದಕ್ಕೋ, ಹತ್ತಿರದ ಗ್ಯಾರೇಜಿಗೆ ಅದನ್ನು ತಳ್ಳುವುದಕ್ಕೋ ನೆರವಾಗುತ್ತಿದ್ದರು. ಪೆಟ್ರೋಲು ಖಾಲಿ ಇದ್ದರೆ ನನಗೆ ನೂಕಲು ಸಹಾಯಮಾಡುತ್ತಿದ್ದರು.

ಇದಕ್ಕೆ ಮುಂಚಿನ ನನ್ನ ಕಾರಿನಲ್ಲಿ ಅದರ ಎಲ್ಲಾ ಭಾಗಗಳೂ ಸೇರಿ ವಾದ್ಯವೃಂದದಂತೆ ಮೊಳಗುವ ಅಭಾಸ ಮಾಡಿಕೊಂಡಿದ್ದವು. ಆ ಕಾರನ್ನು ವಿಲೇವಾರಿಮಾಡಿ ಈಗಿನದನ್ನು ಕೊಂಡುಕೊಂಡೆ–ಬಹಳ ಅಗ್ಗವಾಗಿ, ಅವಸರದಲ್ಲಿ. ಮನೆಗೆ ತೆಗೆದುಕೊಂಡು ಹೋಗುವಷ್ಟು ಅದರಲ್ಲಿ ಶಕ್ತಿಯಿದೆಯೆಂದು ನಿಶ್ಚಯಮಾಡಿಕೊಂಡಿದ್ದೆ, ನಿಜ. ಆದರ ಒಂದು ಪಾರ್ಶ್ವದಲ್ಲಿ ಅದು ಸ್ವಲ್ಪ ಹೆಚ್ಚಾಗಿಯೇ ಬಡಬಡಿಸುತ್ತಿದೆಯೇನೋ ಅನ್ನಿಸಿತು. ಗ್ಯಾರೇಜಿಗೆ ತೆಗೆದುಕೊಂಡು ಹೋಗಿ ತೋರಿಸಿದಾಗ ಒಂದು ಚಕ್ರದಲ್ಲಿ ಟ್ಯೂಬೇ ಇಲ್ಲದ್ದು, ಕಂಡುಬಂತು. ಟ್ಯೂಬಿಗೆ ಬದಲಾಗಿ ಕಾಗದದ ಚೂರುಗೀರು ತುಂಬಿಸಲಾಗಿತ್ತು. ಕಾರಿನಲ್ಲಿ ಸಾಕಷ್ಟು ಶಬ್ದ ಮಾಡುವ ಭಾಗಗಳಿದ್ದುದರಿಂದ, ಈ ಐಬು ನನಗೆ ಕಾರು ಪರೀಕ್ಷೆಯ ಸಮಯದಲ್ಲಿ ಗೋಚರವಾಗಿರಲಿಲ್ಲ.

ನನ್ನ ಅಭಿಪ್ರಾಯದಲ್ಲಿ, ನಾನು ಮೊದಲೇ ಸೂಚಿಸಿದ ಹಾಗೆ, ಹಳೆಕಾರಿನ ಮಾಲೀಕರು ಮೊಟ್ಟಮೊದಲು ಯೋಚಿಸಬೇಕಾದ ವಿಷಯವೆಂದರೆ, ಅದನ್ನು ಹೇಗೆ ಮಾರಬೇಕು ಅನ್ನುವುದು. ನೀವು ಒಂದೇ ಕಾರಿನ ಭಕ್ತರಾದರೆ ಆ ಮಾತೇ ಬೇರೆ, ಬಿಡಿ. ಆಗ ನೀವು ಕಾರಿನ ಒಳಗಡೆ ಕಳೆಯುವುದಕ್ಕಿಂತ ಹೆಚ್ಚು ಸಮಯವನ್ನು ಕಾರಿನ ಕೆಳಗೇ ಕಳೆಯುವುದಂತೂ ಖಂಡಿತ.

ಕಾರು ಮಾರ ಹೊರಟವರಿಗೆ ನನ್ನ ಸಲಹೆ; ಅದರ ಸದ್ಗುಣಗಳನ್ನು ವರ್ಣಿಸುವುದರಲ್ಲಿ ಹೊತ್ತು ಕಳೆಯಬೇಡಿ ಅಂತ. ನೀವು ಅದಕ್ಕೆ ಹೊಸದಾಗಿ ಬಳಿದ ಬಣ್ಣಕ್ಕೆ ಮಾರುಹೋಗಿ ಯಾರೂ ನಿಮ್ಮ ಮಾತನ್ನು ನಂಬಿ ಬಿಡುವುದಿಲ್ಲ. ಹಾಗೇ ಕಾರಿನಲ್ಲಿನ ಲೋಪದೋಷಗಳನ್ನೆಲ್ಲ ಕೊಳ್ಳುವವರಿಗೆ ತಿಳಿಸಬೇಕಾದ ಅಗತ್ಯವೂ ಇಲ್ಲ. ಇಂದಲ್ಲ ನಾಳೆ ಅವರು ಅದನ್ನೆಲ್ಲ ಕಂಡುಹಿಡಿಯುವುದು ನಿಸ್ಸಂದೇಹ. ಆದರೂ ಒಂದು ಮಾತನ್ನು ಮಾತ್ರ ನೀವು ಮುಚ್ಚಿಡಲೇಬೇಕು. ನೀವು ದಿನೇ ದಿನೇ ಏರುತ್ತಿರುವ ಕಾರಿನ ಖರ್ಚನ್ನು ನಿರ್ಧರಿಸಲು ಶಕ್ತರಲ್ಲವೆನ್ನುವ ವಿಷಯ.

ನೀವೇನಾದರೂ ಈ ಕಾರಣದಿಂದ ಕಾರನ್ನು ಅವಸರದಲ್ಲಿ ಮಾರ ಹೊರಟಿದ್ದೀರಿ ಅನ್ನುವುದು ತಿಳಿದರೆ, ಕೊಳ್ಳುವವರು ಅದನ್ನು ವಿಪರೀತ ಕಡಿಮೆ ಬೆಲೆಗೆ ಕೇಳುವುದು ಸಹಜ. ಆದರಿಂದ ನಿಮ್ಮ ಧೋರಣೆಯಲ್ಲಿ ಒಂದು ರೀತಿಯ ಉದಾಸೀನತೆಯಿದ್ದಾಗಿರಬೇಕು. ಇಷ್ಟಕ್ಕೂ ಅದು ಮಾರಾಟವಾಗದೇ ಉಳಿಯಬಹುದೆನ್ನುವುದೇ ನಿಮ್ಮ ಚಿಂತೆಯಿರಬಹುದು. ಇರಲಿ. ನೀವಂತೂ ಅದನ್ನು ಓಡಾಡಿಸಿ ಜೇಬು ಬರಿದು ಮಾಡಿಕೊಳ್ಳಲು ತಯಾರಾಗಿರುವುದಿಲ್ಲ ಅನ್ನಿ. ಕಾರು ಧೂಳು ಮುಚ್ಚಿ ತುಕ್ಕು ಹಿಡಿಯುವ ಸೂಚನೆ ತೋರಲಾರಂಭಿಸಿತು ಅನ್ನಿ. ಇಂಥ ಪರಿಸ್ಥಿತಿಯಲ್ಲಿ ನಾನು ಮಾಡಿದ ಹಾಗೆ ನೀವೂ ಮಾಡಬಹುದು. ಮನೆಯ ಮುಂದೆ ಕಾರು ನಿಲ್ಲಿಸಿ ಅದನ್ನು ಬಾಡಿಗೆಗೆ ಕೊಡಿ. ಬೀಡಿ ಅಂಗಡಿಯೋ, ಭೇಲ್‌ಪುರಿ ಅಂಗಡಿಯೋ, ಹಣ್ಣಿನಂಗಡಿಯೋ ಅದರಲ್ಲಿ ಸ್ಥಾಪಿತವಾಗಿ ನಿಮಗೊಂದಿಷ್ಟು ಬಾಡಿಗೆಯ ಆದಾಯವಂತೂ ಗ್ಯಾರಂಟಿ!

ನಿಮ್ಮ ಕಾರು ಇಂಥ ಅವಮಾನ ಸಹಿಸುವ ಸ್ಥಿತಿಗೆ ಇಳಿಯುವುದು ನಿಮಗೆ ಇಷ್ಟವಿರುವುದಿಲ್ಲವೇನೋ. ಆದರೆ ಇಲ್ಲಿ ನೀವು ಸ್ವಲ್ಪ ಎಚ್ಚರವಹಿಸದಿದ್ದರೆ ಈ ಅವಮಾನವನ್ನು ನೀವೋ ನಿಮ್ಮಾಕೆಯೋ ಭರಿಸಬೇಕಾಗಿ ಬರಬಹುದು. ಬಹುಶಃ ನಿಮ್ಮಾಕೆಯೆ ನಿಮ್ಮ ಕಾರುಕೊಳ್ಳುವ ಮಾರುವ ಧಂದೆಯಲ್ಲಿನ ಅರಕತೆಯನ್ನು ತಿರಸ್ಕಾರ ದೃಷ್ಟಿಯಿಂದ ನೋಡಬಹುದು.

ಒಬ್ಬಾಕೆಯ ಮಗು ಆಕೆಯನ್ನು ಕೇಳುತ್ತಿದ್ದದ್ದು ನನ್ನ ಕಿವಿಗೆ ಬಿತ್ತು.

“ಅಮ್ಮ, ಕಾರು ಬಹಳ ಹಳೇದಾಗಿ ಬಿಟ್ರೆ ಅದನ್ನ ಏನ್ಮಾಡ್ತಾರೆ?” ಅಂತ ಕೇಳಿತು ಆ ಮಗು.

“ಅದನ್ನ ನಿಮ್ಮಪ್ಪನಿಗೆ ಮಾರಿಬಿಡ್ತಾರೆ, ಅಷ್ಟೆ” ಅಂದರು ಆಕೆ.

ನಿಮ್ಮ ಕಾರು ಅವಮಾನಿತವಾಗಬಹುದು ಅಂತ ಹೇಳಿದೆನಷ್ಟೆ. ನನಗೊಂದು ಪ್ರಸಂಗ ನೆನಪಿಗೆ ಬರುತ್ತದೆ. ನಾನೊಂದು ಸಲ ನನ್ನ ಜರ್ಝರಿತ ಕಾರನ್ನು ಒಬ್ಬ ಹಳೇ ಕಾರು ವ್ಯಾಪಾರಿಯ ಹತ್ತಿರ ತೆಗೆದುಕೊಂಡು ಹೋದೆ. ವ್ಯಾಪಾರಿ ಅದು ಮಾರಾಟವಾಗಬಲ್ಲದೆಂಬ ಭರವಸೆ ಕೂಡ ಕೊಡಲಿಲ್ಲ. ಆತನು ಹೇಳಿದ್ದರ ಪ್ರಕಾರ ಕಾರಿನ ಬಿಡಿ ಭಾಗಗಳನ್ನೂ ಪ್ರತ್ಯೇಕವಾಗಿ ಮಾರುವುದು ಕಷ್ಟ. ಹಾರನ್ ಮಾತ್ರ ರಬ್ಬರ್ ಬಲ್ಬಿನ ಪ್ರತ್ಯೇಕ ಹಾರನ್ ಆದರಿಂದ ಅದು ಮಾರಾಟವಾಗುವುದು ಸಾಧ್ಯ, ಅಂದ ಆ ವ್ಯಾಪಾರಿ.

ಹಾಗಾದರೆ ನಿಮ್ಮ ಕಾರನ್ನು ಪೆಟ್ಟಿಗೆಯಂಗಡಿಯಾಗಿ ಪರಿವರ್ತಿಸಿ ಅದರ ಗರ್ವಭಂಗ ಮಾಡಲು ಇಷ್ಟವಿಲ್ಲದಿದ್ದರೆ ನೀವೇನು ಮಾಡಬೇಕು? ನನಗೆ ತೋಚುವುದು ಒಂದೇ ಮಾರ್ಗ. ಯಾವುದಾದರೂ ಅಡ್ಡ ಬೀದಿಯಲ್ಲಿ, ಯಾರೂ ಇಲ್ಲದ ಸಮಯ ನೋಡಿ, ಅದನ್ನು ನಿಲ್ಲಿಸಿ ಹೊರಟುಬನ್ನಿ, ಮತ್ತೆ ಆ ಕಡೆ ಸುಳಿಯಬೇಡಿ. ಕಾಗದ ಪತ್ರಗಳೇನಿದ್ದರೂ ಅದರಲ್ಲಿಡದೆ ಖಾಲಿಮಾಡಿ ತನ್ನಿ. ಇಲ್ಲದೆ ಹೋದರೆ ಅವುಗಳಿಂದ ಯಾರಾದರೂ ನಿಮ್ಮ ಹೆಸರು ವಿಳಾಸ ಪತ್ತೆ ಹಚ್ಚಿ ಕಾರನ್ನು ನಿಮ್ಮ ಮನೆಯೆದುರಿಗೇ ತಂದು ನಿಲ್ಲಿಸಿಯಾರು!

# ಬ್ಯಾಂಕಿನಲ್ಲಿ ರಸನಿಮಿಷಗಳು

**-ಎಚ್. ಡುಂಡಿರಾಜ್**

---

ಎಂದಿನ ಹಾಗೇ ಅಂದು ಕೂಡಾ ಒಂದಿಷ್ಟು ಪತ್ರಗಳು ಬಂದಿದ್ದವು. ಅವುಗಳಲ್ಲಿ ಆಕಾಶವಾಣಿಯಿಂದ ಬಂದ ಪತ್ರವನ್ನು ಅತ್ಯಂತ ಉತ್ಸಾಹದಿಂದ ಮೊದಲು ಒಡೆದು ಓದತೊಡಗಿದೆ. ಓದುತ್ತಿದ್ದಂತೆ ನನ್ನ ಉತ್ಸಾಹ ಜಗ್ಗನೆ ಇಳಿದು ಹೋಯಿತು. ಕಾರಣ ನನಗೆ ಭಾಷಣಕ್ಕೆ ಸೂಚಿಸಲಾಗಿದ್ದ ವಿಷಯ-ಬ್ಯಾಂಕಿನಲ್ಲಿ ರಸ ನಿಮಿಷಗಳು! ಅಂಕೆ ಸಂಖ್ಯೆಗಳ ಜತೆ ಸೆಣಸಾಡುವ ಈ ಒಣ ಉದ್ಯೋಗದಲ್ಲಿ ರಸ ಎಲ್ಲಿ ಹುಡುಕೋದಪ್ಪ ಅಂತ ಚಿಂತೆಯಾಯ್ತು. ನನ್ನ ಮಿತ್ರರೊಬ್ಬರು ಯಾವಾಗಲೂ ಹೇಳ್ತಾರೆ-ಬ್ಯಾಂಕ್ ಉದ್ಯೋಗಿಗಳಾದ ನಾವು ಹೆಣಕ್ಕಿಂತಲೂ ಕಡೆ ಅಂತ. ಯಾಕೆ ಅಂದ್ರೆ, ಹಣ ಕಂಡ್ರೆ ಹೆಣ ಕೂಡಾ ಬಾಯ್ಬಿಡುತ್ತೆ ಅನ್ನೊ ಗಾದೆ ಇದೆ. ಆದರೆ ನಾವು ಬಾಯಿ ಬಿಡೋ ಹಾಗಿಲ್ಲ. ಸದಾ ಇನ್ನೊಬ್ಬರ ಹಣದ ಜತೆ ಹೆಣಗಾಡ್ತಾ, ತುಸು ಎಚ್ಚರ ತಪ್ಪಿದರೂ ಸಂಜೆ ಮನೆಗೆ ಹೋಗುವಾಗ ಕಿಸೆಯಿಂದ ಹಣ ಕಟ್ಟಿ ಹೋಗಬೇಕು. ಇಂಥ ರಿಸ್ಕ್ ನಿಮಿಷಗಳೇ ಹೆಚ್ಚಾಗಿರುವ ಈ ಬ್ಯಾಂಕಿನಲ್ಲಿ ರಸ ನಿಮಿಷಗಳನ್ನು ಅರಸೋದು ಅಂದ್ರೆ ಚುನಾವಣಾ ಪ್ರಣಾಳಿಕೆಯಲ್ಲಿ ಸತ್ಯವನ್ನು ಹುಡುಕಿದ ಹಾಗೆ.

ಸರಿ, ಈ ಕೆಲಸ ನನ್ನಿಂದ ಆಗೋದಿಲ್ಲ. ಆಕಾಶವಾಣಿಯವರಿಗೆ ಹಾಗೇ ಪತ್ರ ಬರೆಯೋಣ ಅಂತ ಶುರು ಮಾಡಿದೆ. "ಸ್ವಾಮಿ ಕಾರ್ಯಕ್ರಮ ನಿರ್ವಾಹಕರೆ, ನಿಮಗೆ ನನ್ನ ಮೇಲೆ ನಿಜವಾಗಿಯೂ ಕೋಪ ಬಂದಿದ್ರೆ ಹಾಗಂತ ನೇರವಾಗಿ ತಿಳಿಸಬಹುದಿತ್ತು. ಎಂದಿನಂತೆ ಯಾವುದಾದರೂ ಕವಿತೆ ಓದಿ ಅಂತಲೋ, ನಾಟಕದಲ್ಲಿ ಪಾತ್ರ ಮಾಡಿ ಅಂತಲೋ ತಿಳಿಸೋದು ಬಿಟ್ಟು, ಇಂಥ ಕಷ್ಟಕರವಾದ ಕೆಲಸ ಕೊಟ್ಟು ಕಾಡಬೇಕಾಗಿರಲಿಲ್ಲ. ಬೇರೆ ಯಾವ ಶಿಕ್ಷೆಯನ್ನಾದರೂ ಸ್ವೀಕರಿಸಲು ಸಿದ್ಧ. ಆದರೆ ಈ ಭಾಷಣ ಮಾತ್ರ ಖಂಡಿತಾ ಸಾಧ್ಯವಿಲ್ಲ" ಅಂತ ಬರೆದೆ.

ಕಾಗದ ಮಡಚಿ ವಿಳಾಸ ಬರೀಬೇಕು ಅನ್ನೋವಾಗ ಮೇಜಿನ ಮೇಲಿದ್ದ ಇಂಟರ್ ಕಾಮ್- ಟ್ರಿಣ್ ಅಂತು. ಈ ಇಂಟರ್ ಕಾಮ್ ಯಾವಾಗಲೂ ಹೀಗೆ ಒಂದು ನಿಮಿಷ ಕಾಮ್ ಆಗಿ ಏನಾದರೂ personal ಕೆಲಸ ಮಾಡೋಣ ಅಂದ್ರೆ ಇದು ಬಿಡೋದಿಲ್ಲ. ಸರಿ, ಎತ್ಕೊಂಡು "ಹಲೊ" ಅಂದೆ. ಆ ಕಡೆಯಿಂದ ಉತ್ತರ ಇಲ್ಲ. ಇನ್ನೊಮ್ಮೆ ಹಲೋ ಎಂದೆ. ಉತ್ತರ ಬಂತು. "ಟೆಸ್ಟಿಂಗ್, ಟೆಸಿಂಗ್"

ಅಂದ ಹಾಗೇ ಈ ನಮ್ಮ ಇಂಟರ್ ಕಾಮ್ ತುಂಬಾ ವಿಶಿಷ್ಟವಾದದ್ದು. ವಾರದಲ್ಲಿ 4 ದಿನ ಅದು ಕೆಟ್ಟು ಹೋಗಿರುತ್ತೆ. ಉಳಿದ 3 ದಿನ ರಿಪೇರಿ ಆಗ್ತಾ ಇರುತ್ತೆ. ಹಾಳಾಗ್ ಹೋಗ್ಲಿ ಅಂತ ಸುಮ್ಮನೆ ಇದರೆ, ಅದು ಸುಮ್ನಿರಬೇಕಲ್ಲ. ಪುನಃ 'ಟ್ರಿಣ್' ಅಂತು. ಹಲೋ ಅಂದಾಗ ಉತ್ತರ ಅದೇ 'ಟೆಸ್ಟಿಂಗ್' ಮಾರನೇ

ಸಲವು ಹೀಗೇ ಆಯ್ತು. ನಾಲ್ಕನೇ ಬಾರಿಯೂ ಅದೇ ಗೊಗ್ಗರು ದನಿ ಆ ಕಡೆಯಿಂದ "ಟೆಸ್ಟಿಂಗ್" ಅಂತ ಹೇಳಿದಾಗ ನನಗೆ ರೇಗಿ ಹೋಯ್ತು.-

"ರೀ ಯಾವಾಗ ನೋಡಿದರೂ ಟೆಸ್ಟಿಂಗ್ ಟೆಸ್ಟಿಂಗ್ ಅಂತಿರಲ್ರಿ, ಬೇರೆ ಏನಾದರೂ ಇಂಟರೆಸ್ಟಿಂಗ್ ಇದ್ರೆ ಹೇಳಿ" ಅಂದೆ.

"ಏನಿಲ್ಲಾ ಸಾರ್!, ಟೆಸ್ಟಿಂಗ್, ಟೆಸ್ಟಿಂಗ್"

ಹುಂ ಮಾಡ್ತಿನಿ ಇವನಿಗೆ ಅಂತ-

"ಏನಪ್ಪಾ? ನೀನು ಟೆಸ್ಟ್ ಮಾಡ್ತಾ ಇರೋದು ಇಂಟರ್ ಕಾಮನ್ನೋ ಅಥವಾ ನನ್ನ ಕಿವಿಯನ್ನೊ?" ಅಂತ ಕೇಳಿದೆ. ಆತ ಜೋರಾಗಿ ನಕ್ಕು "ಸ್ಸಾರಿ" ಅಂದ. ನನಗೂ ನಗು ಬಂತು.

ಹೌದು ಬ್ಯಾಂಕಿನಲ್ಲಿ ನಗು ಯಾಕೆ ಇರಬಾರದು? ಪ್ರಯತ್ನಿಸಿದರೆ ಕಸದಲ್ಲೂ ರಸ ತೆಗೆಯಬಹುದು ಅನ್ನಿಸ್ತು. ಆಕಾಶವಾಣಿಯವರಿಗೆ ಬರೆದ ಪತ್ರವನ್ನು ಹರಿದು, ಈ ಭಾಷಣ ಬರೆಯತೊಡಗಿದೆ. ತಾವೇ ಸ್ವತಃ ಅನುಭವಿಸಿದ, ನನ್ನ ಸಹೋದ್ಯೋಗಿಗಳು ಹೇಳಿದ ಹಲವಾರು ರಸನಿಮಿಷಗಳು ಒಂದೊಂದಾಗಿ ನೆನಪಿಗೆ ಬರತೊಡಗಿದುವು. ಮುಖ್ಯ ಕಚೇರಿಯಿಂದ ಶಾಖೆಗಳಿಗೆ reminders ಬರೋ ಹಾಗೆ!

XXX

ಗ್ರಾಮೀಣ ಪ್ರದೇಶದ ಸಣ್ಣ ಪುಟ್ಟ ಬ್ಯಾಂಕ್ ಶಾಖೆಗಳಲ್ಲಿ ಎಷ್ಟೋಸಲ ಮ್ಯಾನೇಜರ್ ಬಿಟ್ಟರೆ ಬೇರೆ ಅಧಿಕಾರಿಗಳೇ ಇರೋದಿಲ್ಲ. ಅಂಥ ಶಾಖೆಗಳಲ್ಲಿ ಮ್ಯಾನೇಜರ್ ರಜೆಯಲ್ಲಿ ಹೋಗಬೇಕಾದ ಸಂದರ್ಭ ಬಂದರೆ, ಮೇಲಾಫೀಸಿನವರು ಬೇರೊಬ್ಬ ಅಧಿಕಾರಿಯನ್ನು ಅಲ್ಲಿಗೆ ಕಳಿಸುವ ಮೂಲಕ ಬದಲಿ ವ್ಯವಸ್ಥೆ ಮಾಡಬೇಕಾಗುತ್ತದೆ. ಅಂಥಾ ಒಂದು ಸಂದರ್ಭದಲ್ಲಿ ಒಬ್ಬರು ಗ್ರಾಮೀಣ ಶಾಖೆಯ ಮೆನೇಜರು ಮುಖ್ಯ ಕಛೇರಿಗೆ ಹೀಗೆ ಟೆಲಿಗ್ರಾಂ ಕಳಿಸಿದ್ರಂತೆ. "Wife sick send substitute" ಅಂದರೆ "ಹೆಂಡತಿಗೆ ಹುಷಾರಿಲ್ಲ. ಬದಲೀ ವ್ಯವಸ್ಥೆ ಮಾಡಿ" ಅಂತ. ಇದಕ್ಕೆ ಹೆಡ್ ಆಫಿಸಿನಿಂದ ಬಂದ ಉತ್ತರವೂ ಅಷ್ಟೇ ಸ್ವಾರಸ್ಯಕರವಾಗಿತ್ತು. "No substitute available. Make local arrangement"

XXX

ಕೆಲವು ಸಲ ಒಂದಕ್ಕಿಂತ ಹೆಚ್ಚು ಮಂದಿ ಒಟ್ಟಾಗಿ ಬ್ಯಾಂಕಿನಿಂದ ಸಾಲ ಪಡೀತಾರೆ. ಅಂಥ ಸಾಲದ ಖಾತೆಯ ಬಗ್ಗೆ ಪತ್ರ ವ್ಯವಹಾರ ಮಾಡೋವಾಗ ನಾವು ಆ ಎಲ್ಲಾ ಜನರ ಹೆಸರನ್ನ ಬರಿಯೋದಿಲ್ಲ. ಉದಾಹರಣೆಗೆ ಸಂಕ್ಷೇಪವಾಗಿ Mr. X S/o Mr. Y and 3 others ಅಂತ ಬರೀತೇವೆ. ಒಂದು ಶಾಖೆಯಲ್ಲಿ ಮಹಿಳೆಯೊಬ್ಬರು ತಮ್ಮ ನಾಲ್ಕು ಜನ ಮಕ್ಕಳೊಂದಿಗೆ Joint ಆಗಿ ಒಂದು ಸಾಲ ಪಡೆದಿದ್ದರು. ಈ ಖಾತೆಯ ಬಗ್ಗೆ ಮುಖ್ಯ ಕಛೇರಿಗೆ ಮಾಹಿತಿ ತಿಳಿಸುವಾಗ ಮೆನೇಜರರು ಏನು ಬರೆದರು ಗೊತ್ತಾ? Loan a/c of Smt. ಸಾವಿತ್ರಿ wife of Ramanna and 4 others! ಅದನ್ನ ಓದಿದ ಮುಖ್ಯ ಕಛೇರಿಯ

ಅಧಿಕಾರಿಗಳು, ಸ್ವಲ್ಪ ರಸಿಕರು ಅಂತ ಕಾಣುತ್ತೆ. ತಕ್ಷಣ ಆ ಮೆನೇಜರರಿಗೆ ಫೋನ್ ಮಾಡಿ "ಏನ್ರೀ? ಪಾಂಚಾಲಿ ಇದ್ದದ್ದು ದ್ವಾಪರಯುಗದಲ್ಲಿ ಅಂದ್ಕೊಂಡಿದ್ದೆ. ಈಗಲೂ ಇದ್ದಾರಾ?" ಅಂತ ಕೇಳಿದ್ರಂತೆ.

ಒಂದು ಕಾಲದಲ್ಲಿ ಬ್ಯಾಂಕಿನಲ್ಲಿ ಸಾಲ ಮಾಡೋದು ಅಂದ್ರೆ ತುಂಬಾ ನಿಕೃಷ್ಟ ಅನ್ನೋ ಭಾವನೆ ಇತ್ತು. ಈಗ ಸಾಲ ಮಾಡೋದೇ ಒಂದು ದೊಡ್ಡ ಸಾಧನೆ ಅನ್ನೋವಂಥ ಕಾಲ ಬಂದಿದೆ. ಹಳ್ಳಿ ಹಳ್ಳಿಗಳಲ್ಲೂ ಬ್ಯಾಂಕಿನ ಶಾಖೆಗಳು ಪ್ರಾರಂಭವಾಗಿ, 'ಸಾಲ ಇಲ್ಲದ ಮನೆಯಿಂದ ಸಾಸಿವೆ ತನ್ನಿ' ಅಂದರೆ ತುಂಬಾ ಕಷ್ಟ ಆಗಬಹುದು. ಒಂದಷ್ಟು ಕಾಲ ಸಾಲ ಮೇಳಗಳು ದೇಶಾದ್ಯಂತ ಸುದ್ದಿ ಮಾಡಿದ್ದು ನಿಮಗೆ ನೆನಪಿರಬಹುದು. ಆ ಸಂದರ್ಭದಲ್ಲಿ ನಾನೊಂದು ಚುಟುಕ ಬರೆದಿದ್ದೆ. "ಮೇಳ" ಅನ್ನೊ ಆ ಚುಟುಕ ಹೀಗಿದೆ:-

ಇದ್ದವರು, ಇಲ್ಲದವರು
ಇಲ್ಲವಾದವರು
ಎಲ್ಲರೂ ಬಂದರು ಸಾಲಮೇಳದಲ್ಲಿ
ಇದ್ದ ಕೆಲವರೂ
ಎದ್ದು ಹೋದರು
ಕವಿಮೇಳದಲ್ಲಿ!

XXX

ಹಳ್ಳಿಯ ಬ್ಯಾಂಕ್ ಶಾಖೆಗಳಲ್ಲಿ ಕೃಷಿ ಸಾಲಗಳು ತುಂಬಾ ಇರುತ್ತವೆ. ಮದುವೆಯಿಂದ ಹಿಡಿದು ಅಂತ್ಯ ಸಂಸ್ಕಾರದವರೆಗೆ ಯಾವುದಕ್ಕೆ ಹಣ ಬೇಕಾದರೂ ನಮ್ಮ ಮುಗ್ಧ ರೈತರು ಬ್ಯಾಂಕಿಗೆ ಬಂದು "ಕ್ರಾಪ್ ಲೋನ್ ಬೇಕು" ಅಂತಾರೆ. ಈ ಕ್ರಾಪ್‌ಲೋನ್ ಅನ್ನೋಪದ ಎಷ್ಟು ಜನಪ್ರಿಯವಾಗಿದೆ ಅಂದ್ರೆ, ಅಚ್ಚಗನ್ನಡದಲ್ಲಿ ಬೆಳೆಸಾಲ ಅಂತ ಹೇಳಿದ್ರೆ ನಮ್ಮ ಹಳ್ಳಿ ಮಂದಿಗೆ ಅರ್ಥ ಆಗೋದಿಲ್ಲ. ನಾನು ಗ್ರಾಮೀಣ ಶಾಖೆಯಲ್ಲಿದ್ದಾಗ ನಡೆದ ಒಂದು ಘಟನೆ. ಒಂದು ದಿನ ಒಬ್ಬ ಮಧ್ಯವಯಸ್ಕ ವ್ಯಕ್ತಿ ಬ್ಯಾಂಕಿಗೆ ಬಂದು "ಕ್ರಾಪ್ ಲೋನ್ ಬೇಕು" ಅಂದ. ಭೂಮಿ ಎಷ್ಟಿದೆ ಅಂತ ಕೇಳಿದ್ದಕ್ಕೆ, ಐದು ಸೆಂಟ್ಸ್ ಮನೆ ಜಾಗ ಬಿಟ್ಟರೆ ಬೇರೆ ಜಮೀನೇ ಇಲ್ಲ ಅಂದ. "ಅಲ್ರೀ ಭೂಮಿನೇ ಇಲ್‌ದಿದ್ದ ಮೇಲೆ ನೀವು ಕ್ರಾಪ್ ಬೆಳೆಸೋದು ಹೇಗೆ?" ಅಂತ ಕೇಳಿದೆ. ಅದಕ್ಕೆ ಆತ "ಕ್ರಾಪ್ ಬೆಳೆಸೋದಲ್ಲ ಸಾರ್, ಬೋಳಿಸೋದು" ಅಂದಾಗ ಅರ್ಥವಾಯ್ತು. ಆತ ನಮ್ಮ ತಲೆ ಕ್ರಾಪ್ ಮಾಡುವ ಕ್ಷೌರಿಕ ವೃತ್ತಿಯವನು ಅಂತ. ಕ್ರಾಪ್ ಮಾಡುವವರಿಗೆ ಕೊಡೋ ಸಾಲ ಕ್ರಾಪ್ ಲೋನ್ ಅಂತ ಆತ ತಿಳ್ಕೊಂಡಿದ್ದ.

XXX

ಸಾಲ ನೀಡೋವಾಗ ಬ್ಯಾಂಕಿನವರು ತೆಗೆದುಕೊಳ್ಳುವ ಕರಾರು ಪತ್ರಗಳಿಗೆ ಮೂರು ವರ್ಷಕ್ಕೊಮ್ಮೆ ಪುನಃ ಸಾಲ ಪಡಕೊಂಡವರು ಸಹಿ ಹಾಕಬೇಕಾಗುತ್ತದೆ.

ಇದಕ್ಕೆ A.O.D. ಅಂದರೆ Acknowledgement of debt ಅಂತಾರೆ. ಮೂರು ವರ್ಷ ಆಗೋದ್ರೊಳಗೆ A.O.D. ತಗೊಳ್ಳದೆ ಇದ್ರೆ ಅದಕ್ಕೆ ಶಾಖೆಯ ಮ್ಯಾನೇಜರರೇ ಹೊಣೆಗಾರರಾಗೋದ್ರಿಂದ ಸಾಮಾನ್ಯವಾಗಿ A.O.D. ಸಿಗಲಿಲ್ಲ, ಅಂದರೆ ಮ್ಯಾನೇಜರನಿಗೆ ತಲೆ ಬಿಸಿಯಾಗುತ್ತೆ. ಒಬ್ಬ ಮ್ಯಾನೇಜರರು ಈ ಕೆಲಸವನ್ನು ಯಾವಾಗಲೂ ತಮ್ಮ ಅಕೌಂಟೆಂಟ್‌ಗೇ ಹೇಳ್ತಾ ಇದ್ದರು. ಅವರು ನೋಡ್ತಾ ಇದ್ರು. ಒಮ್ಮೆ ಆ ಅಕೌಂಟೆಂಟರಿಗೆ ಮ್ಯಾನೇಜರ್ ಬಗ್ಗೆ ಯಾಕೋ ಕೊಂಚ ಬೇಸರ ಆಗಿತ್ತು ಅಂತ ಕಾಣುತ್ತೆ. ಮ್ಯಾನೇಜರ್ರು ಅವರನ್ನ ಕರೆದು- 'ಶೆಟ್ಟಿಯವರೆ ಅದೊಂದು A.O.D. ಆಗಬೇಕು' ಅಂದಾಗ ಶೆಟ್ಟಿಯವರು ಏನಂದ್ರು ಗೊತ್ತಾ? "ಎಂಥದು ಮಾರಾಯರೆ ನಿಮ್ದು ಚಿರಿ-ಪಿರಿ ಯಾವಾಗ ನೋಡಿದ್ರೂ A.O.D. A.O.D. ಸಾಲ ಕೊಟ್ಟಿದು ನೀವಲ್ವಾ? ನೀವೇ ಓಡಿ!"

XXX

"ಸಾಲವನು ಕೊಂಬಾಗ ಹಾಲೋಗರುಂಡಂತೆ ಸಾಲಿಗರು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ" ಅಂತ ಸರ್ವಜ್ಞ ಹೇಳಿದ್ದಾನೆ. ಸಾಲ ವಸೂಲಾತಿಗೆ ಮನೆಯಿಂದ ಮನೆಗೆ ಅಲೆದಾಡುವ ಬ್ಯಾಂಕ್ ಅಧಿಕಾರಿಗಳಿಗೆ ಅನೇಕ ಸ್ವಾರಸ್ಯಕರ ಅನುಭವಗಳು ಎದುರಾಗುತ್ತವೆ. ಸಾಮಾನ್ಯವಾಗಿ ನಾವು ಬರೋದು ಗೊತ್ತಾದ ತಕ್ಷಣ ಸಾಲಗಾರರು ತಲೆ ಮರೆಸಿಕೊಳ್ತಾರೆ. ಮೊದಲು ಬೇಡ ಬೇಡ ಅಂದ್ರು ಎಳನೀರು, ಚಹಾ ಕೊಡ್ತಾ ಇದ್ದವರು ವಸೂಲಿಗೆ ಹೋದಾಗ ನೀರು ಸಹ ಕೊಡೋಲ್ಲ. ಒಮ್ಮೆ ಒಬ್ಬ ಸಾಲಗಾರ ಬ್ಯಾಂಕ್ ಮ್ಯಾನೇಜರು ಬರೋದನ್ನ ನೋಡಿ, ಮನೆ ಮುಂದಿದ್ದ ಮಾವಿನ ಮರದಲ್ಲಿ ಅಡಗಿಕೊಂಡು, ತನ್ನ 4 ವರ್ಷದ ಮಗನ ಹತ್ತಿರ, ಮ್ಯಾನೇಜರು ಬಂದು ಕೇಳಿದರೆ "ಅಪ್ಪ ಇಲ್ಲಿ ಇಲ್ಲ ಅಂತ ಹೇಳು" ಅಂದನಂತೆ. ಮಗ ಅಪ್ಪ ಹೇಳಿದ ಹಾಗೇ ಮಾಡಿದ. ಅಷ್ಟೇಕೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮ್ಯಾನೇಜರರು ಕೇಳುವ ಮೊದಲೇ "ನಮ್ಮಪ್ಪ ನಮ್ಮಪ್ಪ ಮರದ ಮೇಲಿಲ್ಲ" ಅಂದು ಬಿಟ್ಟ

XXX

ಬ್ಯಾಂಕೊಂದರ ಪ್ರಧಾನ ಕಛೇರಿಯಲ್ಲಿ ಕೆಲಸ ಮಾಡುತ್ತಿರುವ ನನ್ನ ಸ್ನೇಹಿತರೊಬ್ಬರು ಹೇಳಿದ ಒಂದು ಪ್ರಸಂಗ ನೆನಪಾಗ್ತಿದೆ. ಅವನ ಮೇಲಾಧಿಕಾರಿಗಳಿಗೆ ಸ್ವಲ್ಪ 'ಅಹಂ' ಜಾಸ್ತಿ. ಈತ ಬರೆದ ಆಫೀಸು ಪತ್ರಗಳಿಗೆ ಸಹಿ ಹಾಕೋ ಮೊದಲು "ಅದು ಸರಿ ಇಲ್ಲ ಇದು ಸರಿ ಇಲ್ಲ" ಅಂತ ಏನಾದರೂ ತಿದ್ದುಪಡಿ ಮಾಡದಿದ್ರೆ ಅವರಿಗೆ ನಿದ್ದೆ ಬರೋದಿಲ್ಲ. You are requested to send the particulars ಅಂತ ಬರೆದ್ರೆ, ಅವ್ರು ಅದನ್ನ You are advised to ಅಂತ ಬದಲಾಯಿಸುತ್ತಿದ್ದರು. ಮುಂದಿನ ಬಾರಿ ಇವ You are advised to ಅಂತ ಬರ್ಕೊಂಡು ಹೋದ್ರೆ ಅವರು ಅದನ್ನ You are requested to ಅಂತ ಮಾಡ್ತಿದ್ರು. ಕೊನೆಗೆ ಒಂದು ದಿನ ನನ್ನ ಮಿತ್ರನಿಗೆ ಬೇಜಾರಾಗಿ You are requested/advised to send the particular ಅಂತ ಬರ್ಕೊಂಡು ಹೋದ. ಮೇಲಾಧಿಕಾರಿಗಳು ಆ ಪತ್ರವನ್ನ ಒಪ್ಕೊಂಡು ತಿಕ್ಕಿ, ತಿಕ್ಕಿ, ಕೊನೆಗೆ

ಅವೆರಡನ್ನೂ ಹೊಡೆದು Please send the particulars ಅಂತ ಬದಲಾಯಿಸಿದರಂತೆ.

ಕಳೆದ ವರ್ಷ ಅಯೋಧ್ಯೆಯಲ್ಲಿ ಕರಸೇವೆಗೆ ತಯಾರಿ ನಡೀತಾ ಇದ್ದ ಸಮಯ. ನನ್ನ ಹತ್ತಿರ ನಮ್ಮ ಗ್ರಾಹಕರೊಬ್ಬರು "ಏನ್ ಸಾರ್, ನೀವು ಕರಸೇವೆಗೆ ಹೋಗೋದಿಲ್ವಾ? "ಅಂತ ಕೇಳಿದರು" "ಯಾಕೆ ಹೋಗ್ಬೇಕು ಸ್ವಾಮಿ? ಇಲ್ಲೇ ದಿನಾ ಮಾಡ್ತಾ ಇದ್ದೀನಲ್ಲ. ನಿಮ್ಮಂಥ ಗ್ರಾಹಕರ ಸೇವೆ, ಗ್ರಾಹ  ಕರಸೇವೆ ಅಂದೆ. ಅವರು ಮತ್ತೆ ಮಾತಾಡಲಿಲ್ಲ.

XXX

ಬ್ಯಾಂಕಿನಲ್ಲಿ ಕೆಲಸ ಮಾಡುವ ಸುಂದರಿಯೊಬ್ಬಳಿಗೆ ಕಪಿ ಹೃದಯದ ಒಬ್ಬ ಯುವಕ ಹೀಗೆ ಪತ್ರ ಬರೆದ: " ಪ್ರಿಯೆ! ನಿನ್ನ ಹೃದಯದ ಖಾತೆಯಲ್ಲಿ ನಾನು ಅದೆಷ್ಟೊ ದಿನಗಳಿಂದ ಪ್ರೇಮಧನವನ್ನು ಠೇವಣಿ ಇಡುತ್ತಿರುವುದು ನಿನಗೆ ಗೊತ್ತಿರಬಹುದು ಈಗ ನನಗೆ ತುರ್ತಾಗಿ ಸ್ವಲ್ಪ ಪ್ರೀತಿ ಬೇಕಾಗಿದೆ. ಕಿಸ್ ಎಂಬ ಚೆಕ್ ಕೊಟ್ಟು ಡ್ರಾ ಮಾಡಬಹುದೆ?" ಪತ್ರ ಓದಿ ಕೋಪದಿಂದ ಕೆಂಡವಾದ ಆ ಬ್ಯಾಂಕಿಗೆ ಒಂದೇ ಸಾಲಿನ ಉತ್ತರ ಬರೆದಳು: " ನಿನ್ನ ಚೆಕ್‌ಬೌನ್ಸ್ ಆಗಿ ನೀನು ಜೈಲಿಗೆ ಹೋಗಬೇಕಾದೀತು ಎಚ್ಚರಿಕೆ"

ಬ್ಯಾಂಕ್ ಶಾಖೆಯ ಕ್ಯಾಶ್ ಕೌಂಟರಿನಲ್ಲಿ ಕುಳಿತುಕೊಳ್ಳುವವರು ತುಂಬಾ ಎಚ್ಚರಿಕೆಯಿಂದ ಇರಬೇಕು. ಹೀಗಾಗಿ ಅವರು ನಗೋದು ಕಡಿಮೆ. ಬ್ಯಾಂಕಿಗೆ ಬಂದ ನನ್ನ ಮಿತ್ರರೊಬ್ಬರು ನನ್ನ ಹತ್ರ " ಏಂತದು ಮಾರಾಯ್ರೆ? ನಗು ಮೊಗದ ಸೇವೆ ಅಂತ ಭಾರೀ ಪ್ರಚಾರ ಮಾಡ್ತೀರಿ. ನಿಮ್ಮ ಕ್ಯಾಶ್‌ನಲ್ಲಿರುವ ಹುಡುಗಿ ನಗುವುದೇ ಇಲ್ವಲ್ಲ!" ಅಂದ್ರು. ನಾನು ಅವರಿಗೆ ಏನೂ ಹೇಳದೆ ಕ್ಯಾಶ್‌ಕೌಂಟರಿನ ಮೇಲಿರೋ ಬೋರ್ಡು ತೋರಿಸಿದೆ. ಅಲ್ಲಿ Cash ಅಂತ ಇಂಗ್ಲಿಷ್‌ನಲ್ಲಿ ಮತ್ತು ಅದರ ಪಕ್ಕದಲ್ಲಿ "ನಗದು" ಅಂತ ಬರೆದಿತ್ತು. ಮುಂದೆ ಇದನ್ನೇ ಒಂದು ಹನಿಗವನ ಮಾಡಿದೆ-

"ಕ್ಯಾಶ್ ಕೌಂಟರಿನ ಹುಡುಗಿಯರ ಮುಖದಲ್ಲಿ ನಗು

ಹುಡುಕಿದರೂ ಸಿಗದು

ಅದಕೆ ಅಲ್ಲಿ ಹಾಕಿದ್ದಾರೆ ಬೋರ್ಡು ನಗದು"

ಹೀಗೇ ನೆನಪು ಮಾಡಿಕೊಳ್ತಾ ಹೋದರೆ ಇನ್ನೂ ಹಲವು ರಸನಿಮಿಷಗಳು ಖುಷಿ ನಿಮಿಷಗಳು ಜ್ಞಾಪಕಕ್ಕೆ ಬರುತ್ತವೆ.

ಮೊದಲು "ಏನಪ್ಪಾ ಬರೆಯೋದು" ಅಂತ ಚಿಂತಿಸುತ್ತಿದ್ದ ನಾನು ಈಗ ಹೇಗಪ್ಪಾ ನಿಲ್ಲಿಸೋದು?" ಅಂತ ಚಿಂತಿಸಬೇಕಾಗಿದೆ.

(ಕೃಪೆ: ಆಕಾಶವಾಣಿ, ಮಂಗಳೂರು)

---

# ಹಸಿರು ಕಾರ್ಡಿಗೆ ಸೀರೆ, ಬತ್ತಲೆಯೇಕೆ ನೀರೆ

–ಎಸ್. ತಮ್ಮಾಜಿರಾವ್

---

ಹಾಳೆ, ಬರೀ ಹಾಳೆ,
ಬಿಳಿಯ ಹಾಳೆಯ ಯುಗವಿದು
ಎಲ್ಲವೂ ಅಲಗುಮಯ.
ಹಳ್ಳಿಗಾಡಿನ ಚರ್ಚುದಾರಿಯ ಮೋರಿ
ಶಾಲೆಯ ಒಡಕು ಚಾವಣಿ ರಿಪೇರಿಗಳಿಗೆ
ಈಗ ಬೇಕಿಲ್ಲ ಚಕ್ರವರ್ತಿಯ ರಾಜಮುದ್ರೆ.
ಬಿಳಿ ಹಾಳೆಯೊಡನೆ ಇಂಕು ಬೇಕು.
ಪ್ರತಿಯೊಂದಕ್ಕೂ ಫೈಲು ಬೇಕು.
ಹಂತ ಹಂತವಾಗಿ ಮೇಲೇರಬೇಕು.
ಸಾವಕಾಶವಾಗಿ ಸಾಗಬೇಕು.
ಮಿನಿಟ್ಸು–ನೋಟು–ಸ್ಯಾಂಕ್ಷನ್ನು,
ಎಲ್ಲಾ ನಿಧಾನವಾಗಿ ಯೋಜಿಸಬೇಕು
ಯೋಚಿಸಿ ತಾಳಿತಾಳಿ ಬಾಳಬೇಕು.
ಸಮಿತಿಗಳು–ಶಿಫಾರಸ್ಸುಗಳು, ಕಮಿಟಿಗಳು–ಕಮಿಷನ್‌ಗಳು
ಎಲ್ಲಕ್ಕೂ ಜೀವಾಳ ಹಾಳೆಗಳು.

ಹುಟ್ಟಲು–ಮೆಟ್ಟಲು ಹತ್ತಲು
ಮಹಡಿ ಮನೆ ಬಾಗಿಲು ತಟ್ಟಲು
ಗುರಿ ಮುಟ್ಟಲು ಯೋಜನೆ
ಪ್ರತಿ ಕೆಲಸದ ನಿಯೋಜನೆ, ಶ್ರಮ ವಿಭಜನೆ. ಇದು,
ಮಂಡಲಗಳಲ್ಲಿ–ಪರಿಷತ್ತುಗಳಲ್ಲಿ ಭಜನೆ.
"ಬಳಸಬೇಕಾದ ಇನ್‌ಪುಟ್ಟು,
ಬರಬಹುದಾದ ಔಟ್‌ಪುಟ್ಟು,
ಎಲ್ಲವೂ ಪ್ರಪೋರ್ಷನೇಟ್ಟು" ಎಂದ ಲಿಯ್ಯೂಟಿಪ್ಸ್ಕ.
ಕಿಂಚಿತ್ ತಪ್ಪಿದರೂ ಧಕ್ಕೆ ಸಮತೋಲನಕ್ಕೆ.

ಸರಕಿಗೆ-ಸರಕು ಕೊಳ್ಳುವ ಕಾಲದಲ್ಲಿ,
ಬೆವರಿಗೆ ಬೆಲೆಯಿತ್ತು. ಕಾಸಿಗೆ ಕಿಮ್ಮತ್ತಿತ್ತು.
'ಧಾನ್ಯಂ ಬಹುಗುಣಂ' ಎಂದ ಕೌಟಿಲ್ಯ?
ಬೇಸಾಯವೆ ಬದುಕು, ಬೋಲು-ನೆಟ್ಟುಗಳು
ಯಂತ್ರಗಳು ಮಂತ್ರಗಳಂತೆ ತಿನ್ನಲು ಅಲ್ಲವೆಂದ ಕ್ವೇನೇ, ದಿ ಫಿಜಿಯೋಕ್ರೇಟ್ಸ್.

ದುಡ್ಡಿನಿಂದ ಸರಕು ಕೊಂಡು ಹಣ ಗುಣಿಸುವ ಕಾಲ,
ಬಂತು ವಣಿಕರ ಕಾಲ, ಬಂಗಾರವೇ ಬಂಡವಾಳ.
ಬಡ್ಡಿ-ಚಕ್ರಬಡ್ಡಿ-ಸುಸ್ತಿಬಡ್ಡಿ, ಒಟ್ಟಾಗಿ ಋಣಭಾರ
ದುಡ್ಡೇ ದೊಡ್ಡಕ್ಕನೆಂಬ 'ದೇಯಕ್'ನ ವಾದ.

ಅತಿವೃಷ್ಟಿ ಇಲ್ಲವೇ ಅನಾವೃಷ್ಟಿಗಳಿಂದ
ನೆಲಕೆ ಬಿದ್ದ ಕಾಳು ಭೂಮಿಗೆ-
ಬೆವರು ಸುರಿಸಿದ್ದೇ ಬಂತು ನಿನಗೆ.
ಕಾಸಿನ ಕಥೆ ಹಾಗಲ್ಲ, ಮಾಸದ, ಬಾಡದ
ಅದು ತಾಳುತ್ತೆ-ಬಾಳುತ್ತೆ.
ಕಾಸನ್ನು ಭರಿಸುವ ಭಾವವಿದ್ದ
ಸಾಹಸಿ ಬದುಕಿ-ಬಾಳುತ್ತಾನೆ,
ಷುಂಪೀಟರ್ ಉದ್ಯಮಪತಿಯು ಗಾದೆ ಹಾಡುತ್ತಾನೆ.

ಸಹಕಾರದ ಮಟ್ಟುಹಾಕಲಿ ಸರ್ಕಾರ,
ಭೂದಾನ-ಶ್ರಮದಾನದ ಮಾತು-
'ಎಲ್ಲರಿಗಾಗಿ ಒಬ್ಬನು-ಒಬ್ಬನಿಗೆ ಎಲ್ಲರು'
ಸರ್ವೋದಯ ಸೂರ್ಯ ನೆತ್ತಿಗೇರಿದಾಗ
ಸುರಿಯುತ್ತೆ ಬಿಸಿಲು ಕೊಂಚ ಹೊತ್ತು.
ಸಂಜೆಯಾಗಲು ಸಮುಷ್ಟಿಯ ಗೋಷ್ಠಿ
ರೆಟ್ಟೆ ಬಲದಷ್ಟು ದುಡಿದು ಮೂಟೆ ಕಟ್ಟು ಬೇಕಾದಷ್ಟು.

ಪ್ರಭವ, ವಿಭವ, ಬಹುಧಾನ್ಯ, ಸಾಧಾರಣಗಳ ಸಾಲು
ವಿಕೃತಿ, ಕ್ರೋಧ, ಕ್ಷಯ, ರಾಕ್ಷಸಗಳ ಅಹವಾಲು
ವಸಂತನ ಚೈತ್ರೋತ್ಸವ ಮೊದಲು ಶಿಶಿರದವರೆಗೆ-
ಫಾಲ್ಗುಣನ ವಿಜಯೋತ್ಸವಗಳೇ ಆದಾಗ
ಸಮೃದ್ಧ-ಮುಗ್ಗಟ್ಟುಗಳ ಟ್ರೇಡ್‌ಸೈಕಲಿಸ್ಟ್‌ಗಳಿಗೆ
ಇಲ್ಲ ಅಂಕಿ-ಸಂಖ್ಯೆಗಳ ಕಾಟ, ಪ್ರಾಸ ರಹಿತ ಪದ್ಯ ಬರೆಯುವ ತ್ರಾಸ.

'ಸರ್ವೇಜನಾಃ-ಸುಖಿನೋಭವಂತು'
ಯೋಗ ಕ್ಷೇಮೋಪನಿಷತ್‌ನ ಶಾಂತಿ ಮಂತ್ರ.
ಯಾವ ಬಂಧ ಅಡ್ಡಾದಿಡ್ಡಿ ಬಾಳಗೀತೆಗೆ
ಸಿಕ್ಕಿದ್ದೇ ಮುಕ್ಕಬೇಕು ಅನುಭೋಗಿ.
ಕಸವೇ ರಸ ಈ ಗ್ರಾಹಕ ಸಾರ್ವಭೌಮನಿಗೆ.
'ಸೊಸೈಟಿ'ಯಲ್ಲಿ ಸಿಕ್ಕುವುದೇ ಗೋಧಿ ಗ್ಯಾರಂಟಿ?
ಹಸಿರು ಕಾರ್ಡಿಗೆ ಸೀರೆ, ಆದರೂ ಬೆತ್ತಲೆಯೇಕೆ ನೀರೆ?

ಬಡವನ ತೂತು ತೂತು ಬಾಳು
ನೆಲವನ್ನು ಕೊರೆದು ಕಾಲುವೆ ಮಾಡು.
ಕೂಲಿಯಾಗಿ ಕೊಡುತ್ತಾರೆ ಕಾಳು.
ಅರ್ಥಶಾಸ್ತ್ರ ರಸಪುರಿ ಹಣ್ಣು
ಹಾಳೆಯ ಮೇಲೆ ರಂಗುರಂಗಿನ ಮಣ್ಣು.
ಕನ್ನಡಿಯಂಗಂಟು, ತುಂಬುವುದು ಕಣ್ಣು.
ಹೊಟ್ಟೆ ಮಾತ್ರ ಖಾಲಿ, ಹಾಳೆ ನೋಟಿನ ಬಿರುಗಾಳಿ
ಗ್ರಾಹಕನ ಜೇಬುಖಾಲಿ, ಕೈ ಚೀಲವೂ ಖಾಲಿ.
ಆಹಾ! ಸಾಕಾರವಾಯಿತು ಪರಮ ಸತ್ಯ.
ಅಬ್ಬಾ! ಅಭಾವ ವೈರಾಗ್ಯವೇ!! ಎಂದರೆ ನೀನು-
ನಿನಗೆಟುಕದು ಬಿಡು-
ಪರಿಸರವಾದಿ ಪಾಲ್ ಎಹ್‌ಲಿಚ್‌ನ ಡೂಮು ಮತ್ತು
ಅರ್ಥಶಾಸ್ತ್ರ ಜ್ಯೂಲಿಯನ್ ಸಿಮ್ಮನ್‌ನ ಬೂಮುಗಳ-
ಆದಿ-ಅಂತ್ಯಗಳ ನಡುವಿನ ಶೂನ್ಯದ ಅರ್ಥ.

# ಉದ್ಯೋಗಾರಣ್ಯಕ

-ಪೀಪಿ

(ಬೃಹದಾರಣ್ಯಕ ಉಪನಿಷತ್ತಿನ ವ್ಯಾಖ್ಯಾನದ ಛಾಯೆ ಕೇವಲ ಕಾಕತಾಲೀಯ-ಸಂ)

## "ವೇದ ಮನೂಚ್ಯಾ ಚಾರ್ಯೋಂತೇ ವಾಸಿನಮನುಶಾಸ್ತಿ!"

**ಮೊದಲನೇ ಅನುವಾಕ-**

ಉದ್ಯೋಗಂ ಪುರುಷ ಲಕ್ಷಣಂ ಎಂದು ಹೇಳಿದ್ದಾರೆ. ಎಲೈ ಜಿಜ್ಞಾಸುವೇ ಎಂಸೀಪಿಗಳಲ್ಲದವರೆಲ್ಲಾ ಪುರುಷ ಶಬ್ದಕ್ಕೆ ಸ್ತ್ರೀಣಾಂಚ ಪುರುಷಾಂಚ ಎಂಬ ನಿಷ್ಪತ್ತಿಯನ್ನು ಒಪ್ಪಿಕೊಳ್ಳತಕ್ಕದ್ದು. ಇರಲಿ. ಇಂದು ನಿನಗೆ ಸರ್ಕಾರಿ ಹುದ್ದೆ ಸಿಕ್ಕಿದೆ. ಇದು ಪೂರ್ವ ಸುಕೃತವೇ ಸೈ. ಸೀಜೀಟೂ ಹುದ್ದೆಯಾದರೇನು? ಸರ್ಕಾರಿ ಹುದ್ದೆ ಎಂಬುದನ್ನು ಎಂದಿಗೂ ಮರೆಯತಕ್ಕದ್ದಲ್ಲ. ಇಂದಿನ ಉದ್ಯೋಗ ಮಾರುಕಟ್ಟೆಯ ಪರಿಸ್ಥಿತಿಯನ್ನು ಪ್ರತ್ಯೇಕವಾಗಿ ವಿವರಿಸಬೇಕಿಲ್ಲವಷ್ಟೆ. ಫಿಸಿಕ್ಸ್ ಎಂಎಸ್ಸಿಗೆ ಕೇವಲ ಸೀಜೀಟೂ ಹುದ್ದೆಯೇ ಎಂದು ಯಾರೂ ಹುಬ್ಬೇರಿಸದಿರಲಿ. ನೀನಾದರೂ ಅಷ್ಟೆ. ಸರಕಾರಿ ಹುದ್ದೆಯ ಕೆಲವು ರಹಸ್ಯಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಬಂದಿರುವನಾದ್ದರಿಂದ ಹೇಳುತ್ತೇನೆ. ಕೇಳುವಂಥವನಾಗು. ಕಸ್ಮಿನ್ನು ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ, ಅಂಥ ವಿದ್ಯೆಯನ್ನು ಹೇಳುತ್ತೇನೆ.

ಉದ್ಯೋಗವೆಂದರೇನು ಎಂದು ಮೊದಲು ತಿಳಿದುಕೊಳ್ಳಬೇಕು. ಉದ್ಯೋಗವೆಂದರೆ ಕಾಗದಗಳನ್ನು ಫೈಲುಗಳನ್ನು ಮತ್ತು ನೋಟುಗಳನ್ನು ತಟಾಯಿಸುವುದು. ಈ ಕೆಲಸವನ್ನು ಸಮರ್ಥವಾಗಿ ಮಾಡಿದವನು ಉತ್ತರೋತ್ತರ ಬಡ್ತಿಗಳಿಗೆ ಅರ್ಹತೆ ಪಡೆಯುತ್ತಾನೆ. ಉದ್ಯೋಗದ ಮೊದಲ ಮಂತ್ರವೆಂದರೆ 'ನೀನು ನಿನ್ನ ಫೈಲುಗಳನ್ನು ಚೆನ್ನಾಗಿ ನೋಡಿಕೋ. ಫೈಲುಗಳು ನಿನ್ನನ್ನು ರಕ್ಷಿಸುತ್ತವೆ'-ಫೈಲೋ ರಕ್ಷತಿ ರಕ್ಷಿತಃ ಎಂಬ ಅನುಭವ ಸಾರಾಮೃತವನ್ನು ಕುಡಿದವನು ತಾತ್ಕಾಲಿಕ ಪದವಿಯಿಂದ ಖಾಯಂ ಪಟ್ಟಕ್ಕೆ ಬಹುಬೇಗ ಏರುತ್ತಾನೆ. ಸರಕಾರವೇ ದೇವರ ಒಂದು ರೂಪವಾದ್ದರಿಂದ ಸರ್ವಶಕ್ತ ನಿಯಮಕ ದೈವಾನುಗ್ರಹದಿಂದ ಕೆಲಸ ಪರ್ಮನೆಂಟ್ ಆಗಲು ಪ್ರತಿದಿನ ಫೈಲಾರಾಧನೆ ಮಾಡತಕ್ಕದ್ದು. ನಶ್ವರ ಮತ್ತು ತಾತ್ಕಾಲಿಕವಾದ ಈ ಜಗತ್ತಿನಲ್ಲಿ ಖಾಯಂ ಹುದ್ದೆ ಪಡೆದುಕೊಳ್ಳುವುದೆಂದರೇನೂ ಸಾಮಾನ್ಯ ವಿಷಯವಲ್ಲ. ಫೈಲುಗಳಿಂದ ಉದ್ಧಾರವಾದವರೂ ಪರಮಪದ ಪಡೆದವರೂ ಇದ್ದಂತೆ, ಫೈಲುಗಳಿಂದಲೇ ವಿನಾಶವಾದವರೂ, ಪಾತಾಳಕ್ಕೆ ತುಳಿಯಲ್ಪಟ್ಟವರೂ, ಡಿಸ್ಮಿಸ್ ಆದವರೂ ಇದ್ದಾರೆ. ಆ ಎಲ್ಲರ ಉದಾಹರಣೆಗಳೂ ನಿನಗೆ ದಾರಿದೀವಿಗೆಯಾಗಲಿ, ಎಚ್ಚರಿಕೆಯ ನಿಶಾನೆಯಾಗಲಿ, ವಿವೇಕದ ಸೋಪಾನವಾಗಲಿ. ಯಾವುದೇ ಕಾರಣಕ್ಕೆ ಫೈಲ್‌ಗಳನ್ನು ಉಪೇಕ್ಷಿಸತಕ್ಕದಲ್ಲ. ಮೊದಲನೇ ಅನುವಾಕ ಸಮಾಪ್ತಿ.

ಎರಡನೇ ಅನುವಾಕ-

ಈಗ ಜವಾಬ್ದಾರಿಯ ವಿಷಯವನ್ನು ಹೇಳುತ್ತೇನೆ. ಜವಾಬ್ದಾರಿಯನ್ನು ಯಾವಾಗಲೂ ಇತರರ ಮೇಲೆ ಹೊರಿಸತಕ್ಕದ್ದು. ಯಾವುದೇ ತಪ್ಪಿಗೆ ತಪ್ಪಿ ಕೂಡಾ ಜವಾಬ್ದಾರನಾಗಬಾರದು. ತಪ್ಪಿತಸ್ಥರ ಮೇಲೆ ಜವಾಬ್ದಾರಿ ಹೊರಿಸಿ ಸೂಕ್ತ ಶಿಕ್ಷೆ ಕೊಡತಕ್ಕದ್ದು- ಎಂಬ ಆದೇಶ ಆಗಿಂದಾಗ್ಗೆ ಮೇಲಿನಿಂದ ಬರುತ್ತಿರುತ್ತದೆ. ಚಾಣಾಕ್ಷನಾದ ಕುಸ್ತಿಪಟು ಹೇಗೆ ಎದುರಾಳಿಯ ಪಟ್ಟುಗಳನ್ನೆಲಾ ತಪ್ಪಿಸಿಕೊಳ್ಳುತ್ತಾನೋ ಅದೇ ರೀತಿ ಚಾಣಾಕ್ಷನಾದ ನೌಕರ, ಜವಾಬ್ದಾರಿಗಳನ್ನು ತಪ್ಪಿಸಿಕೊಳ್ಳುತ್ತಾನೆ. ಇದು ಒಂದು ಬಗೆಯ ಯೋಗವೇ ಸರಿ. ಈ ವಿಷಯವನ್ನು ಆಳವಾಗಿ ಚಿಂತಿಸತಕ್ಕದ್ದು. ನಿನ್ನಿಂದ ಯಾವುದೇ ತಪ್ಪು ಆಗಿರುವ ಬಗ್ಗೆ ಲವಲೇಶದಷ್ಟು ಸಾಕ್ಷಿ ಎಲ್ಲೂ ಅಂದರೆ ಯಾವುದೇ ಫೈಲಿನಲ್ಲೂ ಉಳಿಯದಂತೆ ಜಾಗ್ರತೆ ವಹಿಸಬೇಕು. ಪೇಚಿನಲ್ಲಿ ಅನಿವಾರ್ಯವಾಗಿ ಸಿಕ್ಕಿಹಾಕಿಕೊಂಡಾಗ ಸೃಜನಾತ್ಮಕ ಆಲೋಚನಾ ಪದ್ಧತಿಯಲ್ಲಿ ತಪಸ್ಸು ಮಾಡಿ ಮುಕ್ತನಾಗಲು ಮಾರ್ಗೋಪಾಯಗಳನ್ನು ಹುಡುಕಿಕೊಳ್ಳಬೇಕು. ಇಂಥ ಸಂಕಟಗಳು, ದುಃಖಗಳು, ಪೀಡೆಗಳು ನೌಕರರಿಗೆ ಯಾಕೆ ಬರುತ್ತವೆ ಎಂಬ ಮೂಲಭೂತ ಪ್ರಶ್ನೆಯನ್ನು ಎತ್ತಿದಾಗ ಮೂಲಭೂತ ಕಾರಣಗಳು ಹೊಳೆಯುತ್ತವೆ. ಅಜ್ಞಾನದ ಪ್ರಭೆಯಲ್ಲಿ ನೌಕರ ದಿವ್ಯಸ್ನಾತನಾಗಿ ಅವಿದ್ಯೆಯ ಪರಿಣಾಮದಿಂದ ತಪ್ಪಿಸಿಕೊಂಡು ಕೆಲವು ಪರಾಪರ ಸಿದ್ಧಿಗಳಿಗೆ ಅಧಿಕಾರಿಯಾಗುವನು. ಸಾಮಾನ್ಯವಾಗಿ ಹೊಳೆಯುವ ಮೊದಲನೇ ಕಾರಣವೆಂದರೆ ಕರ್ಮ. ಕರ್ಮ ಮಾಡಿದರೆ ಫಲ. ಒಳ್ಳೆಯದೋ ಕೆಟ್ಟದೋ, ಅನುಭವಿಸಲೇಬೇಕು ಕರ್ಮವನ್ನೇ ಮಾಡದಿದ್ದರೆ, ಅದರ ಫಲವೂ ಇಲ್ಲ. ಆದ್ದರಿಂದ ಸರಕಾರಿ ನೌಕರ ಆದಷ್ಟೂ ಕನಿಷ್ಠ ಮಟ್ಟದಲ್ಲೇ ಕೆಲಸ ಮಾಡತಕ್ಕದ್ದು. ಸಂಪೂರ್ಣವಾಗಿ ಕರ್ಮಸನ್ಯಾಸ ಮಾಡಿದರೆ ಅತ್ಯುತ್ತಮ. ಆದರೆ, ಇದು ಎಲ್ಲ ಸಂದರ್ಭಗಳಲ್ಲೂ, ಎಲ್ಲರಿಗೂ ಸಾಧ್ಯವಾಗಲಾರದೆಂಬುದು ದುರದೃಷ್ಟಕರ ಸಂಗತಿ. ಆದರೂ ಕೆಲವೊಂದು ಉಪಾಯಗಳಿಂದ ಕರ್ಮಭಾರವನ್ನು ಕಡಿಮೆ ಮಾಡಿಕೊಂಡು ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವ ಉಪಾಯವನ್ನು ಮುಂದೆ ಹೇಳುವೆನು. ಕಲಿಯುಗದಲ್ಲಿ ಕೇವಲ ಭಕ್ತಿಯಿಂದ ಮತ್ತು ಕರ್ಮಫಲ ಸಮರ್ಪಣೆಯಿಂದ ಮೋಕ್ಷ ಸಾಧ್ಯವೆಂದು ಅಲ್ಲಲ್ಲಿ ಕೇಳಿಬರುವುದರಿಂದ, ಸರಕಾರಿ ಆಫೀಸಿನಲ್ಲಿ ಕೆಲಸ ಮಾಡಲೇಬೇಕಾದ ಸಂದರ್ಭ ಒದಗಿ ಬಂದ ಪಕ್ಷದಲ್ಲಿ, ಮಾಡಿದ ಕೆಲಸವನ್ನು ಮೇಲಾಧಿಕಾರಿಗಳಿಗೆ ಸಮರ್ಪಿಸಿ ಕರ್ಮಫಲ ಲೇಪದಿಂದ ವಿಮುಕ್ತನಾಗಬಹುದು. ಎಂಥದೇ ಗಹನವಾದ ನಿರ್ಣಯವಿರಲಿ ಅಥವಾ ಕ್ಷುಲ್ಲಕವಾದ ಸಂಗತಿಯಿರಲಿ ನೀನು ಬರೆದ ನೋಟಿಗೆ ಮತ್ತು ಪತ್ರಕ್ಕೆ ಮೇಲಾಧಿಕಾರಿಗಳ ರುಜು ಹಾಕಿಸದೆ ರವಾನಿಸಬಾರದು. ಮುಖ್ಯವಾಗಿ ಗಮನಿಸಬೇಕಾದ ಒಂದಂಶವೆಂದರೆ, ಸರಕಾರಿ ಕೆಲಸದಲ್ಲಿ ತಪ್ಪಿಗೆ ಜವಾಬ್ದಾರರನ್ನು ಗುರುತಿಸುತ್ತಾರೆ, ಶಿಕ್ಷಿಸುತ್ತಾರೆ. ಆದರೆ, ಒಳ್ಳೆಯ ಕೆಲಸಕ್ಕೆ ಪುರಸ್ಕಾರವಿರುವಿದಿಲ್ಲ. ಕಲಿಗಾಲ. ಎಲ್ಲ ನೌಕರರು ಇರುವುದೇ ಒಳ್ಳೆಯ ಕೆಲಸ ಮಾಡಲು ಎಂದು ಸಕಲರೂ ಊಹಿಸಿಕೊಂಡುಬಿಟ್ಟಿರುತ್ತಾರೆ. ಅವರ ಅಂಧಶ್ರದ್ಧೆಗೆ ಮಿತಿಯೇ ಇಲ್ಲ. ಚತುರ್ಯುಗಗಳಲ್ಲೂ ಅತ್ಯಂತ ಪ್ರಗತಿಪರ ಯುಗವೆಂದೂ, ವೈಜ್ಞಾನಿಕ

ಯುಗವೆಂದೂ ಅಭಿದಾನಉಳ್ಳ ಕಲಿಯುಗದಲ್ಲಿ ಇದು ವಿಪರ್ಯಾಸವಲ್ಲವೆ? ಇದನ್ನರಿಯದವರನ್ನು ಕಂಡು ದೇವತೆಗಳು ಮತ್ತು ರುದ್ರಾದಿತ್ಯವಸುರೂಪದ ಪಿತೃಗಳು ನಗರೇ? ಇರಲಿ. ಒಟ್ಟಿನಲ್ಲಿ ಕೆಲಸವನ್ನು ಕಮ್ಮಿಮಾಡಿಕೊಳ್ಳುವುದರ ಮೂಲಕ ಕರ್ಮ ಮಾಡುವುದರಿಂದ ಉದ್ಭವಿಸುವ ಫಲವನ್ನು ಅಂದರೆ ಜವಾಬ್ದಾರಿಯನ್ನು ಕಮ್ಮಿ ಮಾಡಿಕೊಳ್ಳಬಹುದೆಂಬ ಉಪಾಯವಿದೆ. ಇದರ ಮರ್ಮವನ್ನರಿತವನೇ ಜ್ಞಾನಿ.

ಮೂರನೇ ಅನುವಾಕ–

ಕರ್ಮಫಲ ಮತ್ತು ಜವಾಬ್ದಾರಿಗಳಿಂದ ಮುಕ್ತನಾಗುವ ಆಕಾಂಕ್ಷೆ ಮತ್ತು ದಿವ್ಯಾದರ್ಶಗಳಿಂದ ಪ್ರೇರಿತನಾದ ಸಾಧಕ ಸಹೋದ್ಯೋಗಿಗಳಿಗೆ ಮಾತ್ರ ಕತ್ತೆ ಕೆಲಸ ಮಾಡುವವನಂತೆ ಕಾಣಿಸಿಕೊಳ್ಳಬೇಕು. ಇತರರಿಗಿಂತ ನಿನಗೇ ಹೆಚ್ಚಿನ ಕೆಲಸ ಇದೆ ಎಂಬುದು ಎಲ್ಲರ ಕಣ್ಣಿಗೆ ಎದ್ದು ಕಾಣುವಂತೆ ವರ್ತಿಸಬೇಕು. ಇಡೀ ಸೆಕ್ಷನ್ನಿನ ಕೆಲಸ, ಇಡೀ ಆಫೀಸಿನ ಕೆಲಸ, ಇಡೀ ಡಿಪಾರ್ಟ್‌ಮೆಂಟಿನ ಕೆಲಸ, ಯಾಕೆ, ಇಡೀ ಮಿನಿಸ್ಟ್ರಿಯ ಕೆಲಸವೇ ನಿನ್ನ ಮೇಲೆ ಬಿದ್ದಿದೆ ಎಂಬಂತೆ ನೀನು ಯಾವಾಗಲೂ ಚಿಂತಾಕ್ರಾಂತನಾಗಿರಬೇಕು. ಎಲ್ಲ ಕೆಲಸವನ್ನೂ ನೀನೊಬ್ಬನೇ, ಶ್ರಮವನ್ನು ಲೆಕ್ಕಿಸದೇ, ನಿಭಾಯಿಸುತ್ತಿದ್ದೀಯೆಂಬ ಆಭಾಸ ಮತ್ತು ಪ್ರತೀತಿ ಎಲ್ಲೆಲ್ಲೂ ಪ್ರತಿಧ್ವನಿಸಬೇಕು. ಹೆಚ್ಚಿನ ಯಾವ ಕೆಲಸಕ್ಕೆ ಹಚ್ಚಿದರೂ ನೀನದನ್ನು ಹಸಾದವೆಂದು ಒಪ್ಪಿಕೊಳ್ಳಬೇಕು ಮತ್ತು ಮೇಲಾಧಿಕಾರಿಗಳ ಅನುಕಂಪವನ್ನು ಗಳಿಸಬೇಕು. ಸಹೋದ್ಯೋಗಿಗಳ ಅನುಕಂಪವನ್ನು ಗಳಿಸಿದರೆ ಒಳ್ಳೆಯದೇ. ಆದರೆ ಇದೊಂದು ಅತ್ಯಂತ ಕಷ್ಟದ ಕೆಲಸ. ನಿನ್ನ ಯಾವ ಸಹೋದ್ಯೋಗಿಯೂ ತನಗಿಂತ ನಿನಗೆ ಹೆಚ್ಚಿನ ಕೆಲಸವಿದೆಯೆಂದು ಸುತರಾಂ ಒಪ್ಪಿಕೊಳ್ಳಲಾರ. ಆದ್ದರಿಂದ ಸಹೋದ್ಯೋಗಿಯ ಅನುಕಂಪವೆಂಬ ಮರೀಚಿಕೆಯ ಬೆನ್ನಟ್ಟಬೇಡ. ಅದು ಬಂದರೆ ಪೂರ್ವಸುಕೃತವೆಂದು ಸಂತಸಪಡು. ಇಲ್ಲದಿದ್ದರೆ ಆ ಬಗ್ಗೆ ಹೆಚ್ಚಿನ ಮಟ್ಟಿಗೆ ತಲೆಕೆಡಿಸಿಕೊಳ್ಳಬೇಡ. ನಿನ್ನ ವರ್ತನೆಯಿಂದ ಮೇಲಧಿಕಾರಿ ನಿನ್ನ ಬಗ್ಗೆ ಅನುಕಂಪ ತಾಳುವಂತೆ ಮಾತ್ರ ನಿಗಾ ಇಡು. ಇದು ಬಡ್ತಿ, ಇಂಕ್ರಿಮೆಂಟ್ ಮತ್ತು ವರ್ಗಾವಣೆಯ ವಿಷಯದಲ್ಲಿ ಕಾಮಧೇನುವಾಗುತ್ತದೆ. ಸಹೋದ್ಯೋಗಿಗಳೊಂದಿಗೆ, ಅಧೀನ ವರ್ಗದವರೊಂದಿಗೆ ಹೇಗೆ ವರ್ತಿಸಬೇಕೆಂಬುದನ್ನು ಆಚಾರ್ಯ ಆಡಳಿತಾನಂದ ಸ್ವಾಮಿಗಳು ಅಧಿಕಾರಾರಣ್ಯಕದ ಸೇವಾವಲ್ಲಿಯಲ್ಲಿ ವಿಶದವಾಗಿ ಹೃದಯಂಗಮವಾಗಿ ವಿವರಿಸಿದ್ದಾರೆ. ನೋಡಿಕೋ. ಮುಖ್ಯವಾಗಿ ನೆನಪಿಟ್ಟುಕೊಳ್ಳಬೇಕಾದ ಅಂಶವೆಂದರೆ, ಮೇಲಧಿಕಾರಿಗಳಿಗೂ, ಸಹೋದ್ಯೋಗಿಗಳಿಗೂ ಹಾಗೂ ಅಧೀನವರ್ಗದವರಿಗೂ ನೀನು ಯಾವಾಗಲೂ ಸಕಲಭಾರವನ್ನೂ ಹೊತ್ತ ಹುತಾತ್ಮನಂತೆ ಸದಾಕಾಲ ಕಾಣಿಸಿಕೊಳ್ಳಬೇಕು.

ನಾಲ್ಕನೇ ಅನುವಾಕ–

ಕರ್ಮಭಾರದಿಂದ ಬೆನ್ನುಮೂಳೆ ಮುರಿದವನಂತೆ ಕಾಣಿಸಿಕೊಂಡು ಕರ್ಮವನ್ನು ಆದಷ್ಟುಮಟ್ಟಿಗೆ ತಪ್ಪಿಸಿಕೊಳ್ಳಬೇಕೆಂಬ ಮರ್ಮವನ್ನು ಹಿಂದೆಯೇ ಹೇಳಿದ್ದೇನೆ. ಎರಡನೇ ಅನುವಾಕದಲ್ಲಿ ಮೂಲಭೂತ ವಿಷಯಗಳ ಪ್ರಸ್ತಾಪ

ಮಾಡುತ್ತಾ ಕೆಲವೊಂದು ಉಪಾಯಗಳಿಂದ ಕರ್ಮಭಾರವನ್ನು ಕಮ್ಮಿ
ಮಾಡಿಕೊಳ್ಳಬಹುದೆಂಬುದನ್ನು ಸೂಚಿಸಿದ್ದೇನೆ. ಈಗ ಅಂತಹ ಉಪಾಯಗಳಲ್ಲಿ
ಪ್ರಮುಖವಾದ ರಜದ ವಿಷಯವನ್ನು ಹೇಳುತ್ತೇನೆ. ರಜ ಒಂದು ದೈವದತ್ತವಾದ ವರ.
ಎಷ್ಟೋ ಜನ ನೌಕರರು ಅಜ್ಞಾನದಿಂದ ರಜದ ಫಲ ಪಡೆಯಲು ಒಂದೇಟು
ಹೊಡೆಯುತ್ತಾರೆ ರಜ ತೆಗೆದುಕೊಳ್ಳದೆ ದುಡಿದರೆ ಮೇಲಧಿಕಾರಿಯ ಕಟಾಕ್ಷ ತಮ್ಮ ಮೇಲೆ
ಬೀಳುವುದೆಂಬ ಅಭಿಪ್ರಾಯದಿಂದ ಸ್ವಂತ ಮದುವೆಗೂ ರಜೆ ತೆಗೆದುಕೊಂಡಿಲ್ಲ ಎಂಬ
ಹೆಗ್ಗಳಿಕೆಯನ್ನು ಪ್ರಚಾರ ಮಾಡುವವರೂ ಇದ್ದಾರೆ. ಇದು ತಪ್ಪು. ಸರಿಯಾಗಿ ಲೆಕ್ಕ
ಹಾಕಿನೋಡು. ೩೬೫ ದಿನಗಳ ಸಂವತ್ಸರದಲ್ಲಿ ೫೨ ಭಾನುವಾರಗಳೂ, ೫೨
ಶನಿವಾರಗಳೂ ಬರುತ್ತವೆ. ನೀನು ಶನಿವಾರವೂ ರಜೆಯಿರುವ ಸರಕಾರೀ
ನೌಕರನಾಗಿರುವುದು ನಿನ್ನ ಪುಣ್ಯ. ಇದಲ್ಲದೇ ವರ್ಷಕ್ಕೆ ೨ ದಿನಗಳ
ಆರ್.ಎಚ್.ಸೌಲಭ್ಯವಿದೆ. ಒಂದು ವರ್ಷದ ಸೇವಾವಧಿ ಮುಗಿದ ನಂತರ ೩೦
ದಿನಗಳ ಅರ್ಜಿತ ರಜೆ ಸಿಗುತ್ತದೆ. ಸೇವಾ ನಿವೃತ್ತಿಯ ಕಾಲದಲ್ಲಿ ಈ ಬಗೆಯ ರಜ
ಹಣಕ್ಕೆ ಸಮಾನವಾದ್ದರಿಂದ ಪರ್ಯಾಪ್ತಮಟ್ಟ ತಲುಪಿದ ಕೂಡಲೇ ಇದನ್ನು ಬಿಡದೆ
ಉಪಯೋಗಿಸಿಕೊಳ್ಳಬೇಕು. ಇದಲ್ಲದೆ ಅರ್ಧ ಸಂಬಳದ ರಜೆಯನ್ನು ವೈದ್ಯಕೀಯ
ಶಿಫಾರಸ್ಸಿನಿಂದ ಪೂರ್ತಿ ಸಂಬಳದ ರಜೆಯನ್ನಾಗಿ ಪರಿವರ್ತಿಸಿಕೊಂಡು
ಅನುಭವಿಸಬಹುದು. ಈ ಲೆಕ್ಕದಲ್ಲಿ ವರ್ಷಕ್ಕೆ ಹತ್ತು ದಿನ ರಜೆ ಪಡೆಯಬಹುದು.
ಇದಲ್ಲದೆ ಹಬ್ಬ ಹರಿದಿನಗಳ ಆಚರಣೆಗಾಗಿ ವರ್ಷಕ್ಕೆ ೧೬ ದಿನಗಳ ರಜೆ
ಘೋಷಿಸಲಾಗುತ್ತದೆ. ಒಟ್ಟಿನಲ್ಲಿ ಆಫೀಸಿಗೆ ಹೋಗಬೇಕಾದ ದಿನಗಳ ಸಂಖ್ಯೆ
ವರ್ಷದಲ್ಲಿ ೨೦೧ ದಿನಗಳು ಮಾತ್ರ. ಇನ್ನು ೧೬೪ ದಿನಗಳಲ್ಲಿ ಕರ್ಮಲೇಪವಿಲ್ಲದಂತೆ
ತಪ್ಪಿಸಿಕೊಳ್ಳಬಹುದು. ಅಷ್ಟರಮಟ್ಟಿಗೆ ಕೆಲಸ ಕಮ್ಮಿಯಾದ್ದರಿಂದ, ಜವಾಬ್ದಾರಿಯೂ
ಕಮ್ಮಿಯಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಇದು ರಾಜಾರೋಷವಾಗಿ
ಅನುಸರಿಸಬೇಕಾದ ಅನುಶಾಸನ. ಇದಲ್ಲದೆ ೨೦೧ ದಿನಗಳಲ್ಲಿ ಆಫೀಸಿಗೆ ಹೋದರೂ
ಕೆಲಸ ಮಾಡಲೇಬೇಕೆಂಬ ಹಠ ಹಿಡಿಯಬಾರದು. ಯಾವುದೇ ನೆಪದಿಂದ ಫೈಲನ್ನು
ಮುಟ್ಟಲು ಸಾಧ್ಯವಿಲ್ಲವಾದರೆ, ಅದೇ ನೆಪವನ್ನು ಪಟ್ಟಾಗಿ ಹಿಡಿದುಕೊಂಡುಬಿಡಬೇಕು.
ಇಂಥ ನೆಪಗಳು ಆಫೀಸಿನಲ್ಲಿ ದಿನಕ್ಕೆ ನೂರಾರು ಇದ್ದೇ ಇರುತ್ತವೆ. ಏನೋ ಒಂದು
ದಾಖಲೆಯನ್ನು ಖುದ್ದಾಗಿ ಪರೀಕ್ಷಿಸಲು, ತರಲು, ಕೊಡಲು ಮತ್ತೊಂದು ಆಫೀಸಿಗೆ
ಹೋಗಿಬಿಟ್ಟರೆ ಒಂದು ದಿನದ ಲೆಕ್ಕ ಸಿಕ್ಕಿ ಬಿಡುತ್ತದೆ. ಯಾವುದೇ ನಿರ್ಣಯವನ್ನು
ತೆಗೆದುಕೊಳ್ಳದೆ ಸಂಬಂಧಪಟ್ಟ ಅಥವಾ ಸಂಬಂಧವಿರುವಂತೆ ಭಾಸವಾಗುವ
ಮತ್ತೊಂದು ದಾಖಲೆಯ ಪ್ರತಿಯನ್ನು ಕಳಿಸಿಕೊಡಿ ಎಂದು ಕೇಳುವ ಪತ್ರದ
ಕರಡೊಂದನ್ನು ಇಡೀ ದಿನ ಮಾಡಿ ನೀನೆಷ್ಟು ಶ್ರಮಜೀವಿ ಎಂದು
ಸಾಬೀತುಪಡಿಸಬಹುದು. ಬೇರೊಂದು ವಿಭಾಗಕ್ಕೆ ಅಭಿಪ್ರಾಯಕ್ಕೋ ಮುಂದಿನ ಕಾರ್ಯ
ಜರುಗಿಸಲೋ ಒಂದು ನೋಟನ್ನು ಪ್ರಖರವಾದ ಭಾಷೆಯಲ್ಲಿ ಬರೆದು ಒಂದು ದಿನ
ಕೆಲಸ ಮಾಡಿದಂತೆ ತೋರಿಸಿಕೊಳ್ಳಬಹುದು. ಒಮ್ಮೊಮ್ಮೆ ಇಂತಹ ಕೆಲಸದಲ್ಲಿ
ಮುಳುಗಿದ್ದಾಗ ವೇಳೆಯ ಪರಿವೆಯೇ ಇಲ್ಲದೆ, ಇತರ ಸಹೋದ್ಯೋಗಿಗಳೆಲ್ಲಾ ಎದ್ದು
ಹೋಗಿದ್ದರೂ ನೀನಿನ್ನೂ ಫೈಲಿನಲ್ಲೇ ಮುಳುಗಿರುವ ಪರಿಸ್ಥಿತಿ ಇರುತ್ತದೆ. ಆ ದಿನ
ಸ್ವಲ್ಪ ತಡವಾಗಿ ಹೋಗಿ, ಹೆಚ್ಚಿನ ಕೆಲಸ ಮಾಡಿದ್ದಕ್ಕಾಗಿ ಪರಿಹಾರ ರಜೆಯನ್ನು
ಪಡೆದು ಮತ್ತಷ್ಟು ಕರ್ಮಲೇಪದಿಂದ ಪಾರಾಗಬಹುದು. ಇದಲ್ಲದೆ ಧುರೀಣರೂ
ಮಹತ್ವದ ವ್ಯಕ್ತಿಗಳೂ ಇಹಲೋಕ ವ್ಯಾಪಾರ ಮುಗಿಸಿದಾಗ ರಜ ಬರುತ್ತದೆ. ಮತ್ತೆ

ಕೆಲವು ಮಹತ್ವದ ವ್ಯಕ್ತಿಗಳ ಜಯಂತಿ- ಆರಾಧನೆಗಳಿಗೂ ಆಗಿಂದಾಗ್ಗೆ ರಜೆ ಘೋಷಿಸಬೇಕಾಗುತ್ತದೆ. ಒಟ್ಟಿನಲ್ಲಿ ರಜ ಪಡೆದಷ್ಟೂ ನೆಮ್ಮದಿ ಇರುತ್ತದೆ. ತಪ್ಪುಗಳಾಗುವುದಿಲ್ಲ. ಅದರ ಫಲವೂ ಬಾಧಿಸದು. ರಜೋ ವೈಸಃ ಆದ್ದರಿಂದ ರಜದ ಮೇಲಿದ್ದಾಗಷ್ಟೇ ಅಲ್ಲದೆ ಕೆಲಸದ ಮೇಲಿದ್ದಾಗಲೂ ರಜವನ್ನು ಸಾಕ್ಷಾತ್ಕರಿಸಿಕೊಂಡು ಅನುಭವಿಸುವ ರಜಯೋಗ ನಿನಗೆ ಸಿದ್ಧಸಲಿ. ಇಲ್ಲಿ ಒಂದು ದೃಷ್ಟಾಂತವನ್ನು ಹೇಳಿ ಅನುವಾಕ ಸಮಾಪ್ತಿ ಮಾಡುತ್ತೇನೆ. ಒಂದು ಬ್ರಹ್ಮಾಂಡದಂಥ ದೊಡ್ಡ ಸರಕಾರೀ ಕಚೇರಿಯ ಕಾರ್ಯವೈಖರಿಯನ್ನು ನೋಡಲು ವಿದೇಶೀ ಆಡಳಿತ ತಜ್ಞನೊಬ್ಬ ಬಂದನಂತೆ. ಆ ಕಛೇರಿಯ ಗಾತ್ರವೊಂದರಿಂದಲೇ ದಂಗಾದ ಅವರನ್ನು ಕಂಡು 'ನಿಮ್ಮ ಕಛೇರಿಯಲ್ಲಿ ಎಷ್ಟು ಜನ ಕೆಲಸ ಮಾಡುತ್ತಾರೆ?' ಎಂದು ಕೇಳಿದನಂತೆ. ಆಗ ಪ್ರಿ.ಚೇ.ಡೈ.ಜ. ಕೊಟ್ಟ ಪ್ರಾಮಾಣಿಕ ಉತ್ತರವೇನು ಬಲ್ಲೆಯಾ? 'ಶೇಕಡಾ 5 ರಷ್ಟು ಜನ ಮಾತ್ರ'. ಆ ಕಛೇರಿಯ ಶೇಕಡ-95 ರಷ್ಟು ಜನ ಧನ್ಯರಲ್ಲವೇ?

ಐದನೇ ಅನುವಾಕ-

ಅಧಿಕೃತ ಮತ್ತು ಅನಧಿಕೃತ ಎಂಬ ಎರಡು ಬಗೆಯ ರಜೆಗಳಿರುವ ಸೂಚನೆಯನ್ನು ಈ ಹಿಂದೆಯೇ ಹೇಳಿದ ಉಪದೇಶಗಳಲ್ಲಿ ನೀನು ಗಮನಿಸಿರಬಹುದು. ಅಧಿಕೃತ ವರ್ಗದಲ್ಲಿ ಇನ್ನೂ ಹಲವಾರು ಉಪಬಗೆಗಳಿವೆ. ಸರಕಾರಿ ನಿಯಾಮಕಗಳಲ್ಲಿ ಕ್ರೀಡೆ, ಸಂಸ್ಕೃತಿ ಮತ್ತಿತರ ವಿಶೇಷ ಕ್ಷೇತ್ರಗಳ ಸಾಧಕರಿಗೆ ವಿಶೇಷ ರಜಾ ಸೌಲಭ್ಯಗಳಿರುತ್ತವೆ. ಕಾರ್ಮಿಕ ಚಟುವಟಿಕೆಗಳಲ್ಲಿ ಸಮರ್ಪಿತರಾದವರಿಗೂ ವಿಶೇಷ ರಿಯಾಯಿತಿಗಳಿವೆ. ನೀನು ಯಾವುದಾದರೊಂದು ಅಥವಾ ಅನೇಕ ಕ್ಷೇತ್ರಗಳಿಗೆ ಸಂಬಂಧ ಕಲ್ಪಿಸಿಕೊಂಡರೆ ವಿಶೇಷ ರಜೆಗಳ ಸುಗ್ಗಿಯೇ ಆಗುತ್ತದೆ. ಇಂತಹ ಪಟುಗಳು ಆಫೀಸಿನಲ್ಲಿ ಕೆಲಸ ಮಾಡಲೇ ಬೇಕೆಂಬ ನಿರ್ಬಂಧವೂ ಇರುವುದಿಲ್ಲ. ಕ್ರೀಡೆ, ಸಂಸ್ಕೃತಿ ಅಥವಾ ಕಾರ್ಮಿಕ ವರ್ಗಕ್ಕೆ ಸಂಬಂಧಪಟ್ಟಂತಲ್ಲದೆ ಬೇರೆ ಯಾವ ವಿಷಯಕ್ಕೂ ಇಂತಹವರನ್ನು ಬೇರೆ ಯಾರೂ ವಿಚಾರಿಸುವುದೂ ಇಲ್ಲ. ಅವರು ಆಫೀಸಿನಲ್ಲಿದ್ದರೂ ಒಂದೇ, ದಂಡಿನಲ್ಲಿದ್ದರೂ ಒಂದೇ. ಒಟ್ಟಿನಲ್ಲಿ ಸುಖಿಗಳು. ಕರ್ಮಲೇಪದ ಭಯವಿಲ್ಲ. ಈ ಎಲ್ಲ ಅಧಿಕೃತ ಮತ್ತು ಅನಧಿಕೃತ ರಜಗಳನ್ನು ಸೃಜನಾತ್ಮಕವಾಗಿ ಬಳಸಿಕೊಳ್ಳುವುದೂ ಒಂದು ಕಲೆ. ವಾರದಲ್ಲಿ ಒಮ್ಮೊಮ್ಮೆ ಎರಡು ಅಥವಾ ಮೂರು ದಿನಗಳ ಸಾರ್ವಜನಿಕ ರಜೆ ಬರಬಹುದು. ಅಂತಹ ಸಂದರ್ಭದಲ್ಲಿ ರಜಗಳ ನಡುವಣ ಅಂತರವನ್ನು ಜಾಣತನದಿಂದ ತುಂಬಬೇಕು. ಇದಕ್ಕೆ ಯೋಜನೆ ಮುಖ್ಯ. ವಾರ್ಷಿಕ ರಜಾ ಯೋಜನೆಯನ್ನು ಗುರುತು ಹಾಕಿಕೊಳ್ಳಬೇಕು. ವಾರ್ಷಿಕ ರಜಾ ಯೋಜನೆಯನ್ನು ಸಿದ್ಧಪಡಿಸಿಕೊಳ್ಳಬೇಕು. ಅದನ್ನು ಯೋಜನಾ ಆಯೋಗದ ಕರಡು ಪತ್ರದಂತೆ ಅಲಕ್ಷ್ಯ ಮಾಡದೆ ನಿಷ್ಠೆಯಿಂದ ಮತ್ತು ಪ್ರಾಮಾಣಿಕತೆಯಿಂದ ಅನುಷ್ಠಾನಗೊಳಿಸಬೇಕು. ಸೇವೆಯಲ್ಲಿ ನಿಷ್ಠೆ ಮತ್ತು ಪ್ರಾಮಾಣಿಕತೆಗಳಿಗೆ ಅತಿಯಾದ ಮಹತ್ವವಿದೆ. ಹೀಗೆ ಶ್ರದ್ಧಾಪೂರ್ವಕವಾಗಿ ಚಿಂತಿಸಿ ನಡೆದುಕೊಂಡರೆ ಅತ್ಯಲ್ಪ ಶ್ರಮದಿಂದ ವಾರಗಟ್ಟಳೆ ರಜೆಯನ್ನು ಅನುಭವಿಸಬಹುದು. ಇದನ್ನು ನೀನು ಚಾಚೂ ತಪ್ಪದಂತೆ ಪಾಲಿಸಿಕೊಂಡು ಬಾ. ಇದು ಆದೇಶ. ಇದು ಉಪದೇಶ. ಇದು ಸೇವ್ಯ. ಇದನ್ನು ಬಿಟ್ಟು ಮತ್ತೊಂದನ್ನು ಮಾಡತಕ್ಕದಲ್ಲ.

ಐದನೇ ಅನುವಾಕ ಪರಿ ಸಮಾಪ್ತವಾದುದು.

# ರೌಡಿಯನ್ನ ಅಡಗಿಸಿದ ಧನ್ವಂತರಿ

-ಕಂಭಂ. ಕೃಷ್ಣಮೂರ್ತಿ.

ಹುಚ್ಚೂರಾಯರು ಏನಾಗಿದ್ದರು, ಎಲ್ಲಿದ್ದರು, ಏನಾದರು ಎಂಬುವುದು ಒಂದು ಐತಿಹಾಸಿಕ ದಾಖಲೆ. "ಅವರು ಮಿಲ್ಟ್ರಿಯಲ್ಲಿ ಮೇಲ್‌ನರ್ಸ್ ಆಗಿದ್ದರು" ಎಂದು ಕೆಲವು ಹಳೇ ಕತೆಗಳು ಹೇಳಿದರೆ, ಮತ್ತೆ ಕೆಲವರು "ಅವರು ಕಾಂಪೌಂಡರಾಗಿದ್ದರು" ಎಂದು ಹೇಳುತ್ತಿದ್ದರು. ಮಿಲ್ಟ್ರಿಯಲ್ಲಿದ್ದು ರಿಟೈರಾಗಿ ಬ್ಯಾಂಕಿನಲ್ಲಿ ಸೆಂಟ್ರಿಯಾಗಿ ಕೆಲಸ ಮಾಡುತ್ತಿದ್ದ ಶಿವಯ್ಯನ ಪ್ರಕಾರ "ಹುಚ್ಚೂರಾಯರು ಯುದ್ಧದಲ್ಲಿ ಸತ್ತ ಸೈನಿಕರ ಶವಗಳನ್ನು ಒಟ್ಟು ಗೂಡಿಸಿ, ಸುಡುವ ಅಥವಾ ಹೂಳುವ ಖಾತೆಯಲ್ಲಿದ್ದರು" ಎಂದು ತಿಳಿದು ಬರುತ್ತದೆ. ಯಾವುದು ಸತ್ಯವೋ ಯಾವುದು ಮಿಥ್ಯವೋ, ಎಂಬುದು ಶಂಕಾಸ್ಪದವಾಗಿರುವುದರಿಂದ ವಾಚಕರಿಗೆ ಸತ್ಯಾಂಶವನ್ನು ತಿಳಿಸಲು ನಾವು ಅಸಮರ್ಥರಾಗಿದ್ದೇವೆ.

"ಇನ್ನು ಎಲ್ಲಿದ್ದರು?" ಎಂಬ ಪ್ರಶ್ನೆಗೆ ಉತ್ತರ-ಅವರು ಎಲ್ಲೆಲ್ಲೂ ಇದ್ದರೆಂದು ವ್ಯಾಖ್ಯಾರ್ಥ ಮಾಡಬಹುದು. ಆಲೂರಿನಲ್ಲಿದ್ದರು, ಬೇಲೂರಿನಲ್ಲಿದ್ದರು, ಸೀಗೆಹಳ್ಳಿಯಲ್ಲಿದ್ದರು, ಎಣ್ಣೆಕೊಪ್ಪದಲ್ಲಿದ್ದರು, ಅವರು ಎಲ್ಲಿದ್ದರು ಎಂಬ ಪಟ್ಟಿಯನ್ನು ತಯಾರಿಸುವುದಕ್ಕಿಂತ ಅವರು ಎಲ್ಲಿರಲಿಲ್ಲ ಎಂಬ ಯಾದಿಯನ್ನು ತಯಾರಿಸುವುದು ಸುಲಭವಾಗಬಹುದು. ಒಂದೊಂದು ಊರಿನಲ್ಲೂ ತಮ್ಮ ತುಪ್ಪದಾಂಜನೇಯಸ್ವಾಮಿ ದವಾಖಾನೆಯನ್ನು ತೆಗೆದು, ವ್ಯಾಪಾರವಿಲ್ಲದೆ ಹೋದಾಗ, ತಮ್ಮ ದವಾಖಾನೆಯ ಬೋರ್ಡಿನ ಸಮೇತ ಬೇರೆ ಊರಿಗೆ ಹೋಗಿ ಅಲ್ಲಿ ತುಪ್ಪದಾಂಜನೇಯ ಸ್ವಾಮಿಯನ್ನ ಸ್ಥಾಪಿಸಿ ಕೂರುತ್ತಿದ್ದರು. ಹೀಗೆ ಲಂಬಾಣಿ ತಾಂಡದಂತೆ, ಹುಚ್ಚುರಾಯರು ಕುಟುಂಬ ಸಮೇತರಾಗಿ ಊರೂರು ತಿರುಗುತ್ತಿದ್ದರು.

"ಏನಾದರು" ಎಂಬ ಪ್ರಶ್ನೆ ಪ್ರಸಕ್ತ ವಿಷಯಕ್ಕೆ ಸಂಬಂಧಿಸಿದೆ. ಆ ಬಗ್ಗೆ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸಿರುವುದರಿಂದ, ಹುಚ್ಚೂರಾಯರು ಏನಾದರು ಎಂಬುವುದನ್ನು ವಾಚಕರ ಮುಂದಿಡುವುದು ನಮಗೆ ಕಷ್ಟಕರವಲ್ಲ. ಡಾ॥ ಹುಚ್ಚೂರಾಯರು ಕರಡಿ ಬೈಲಿನಿಂದ ರಾತ್ರಿಯೋ ರಾತ್ರಿ ಹೊರಟು ಮುಳ್ಳೂರಿಗೆ ಬಂದಿದ್ದರು. ರಾತ್ರಿಯ ಪ್ರಯಾಣಗಳೇ ಅವರಿಗೆ ಹೆಚ್ಚು ಅಭ್ಯಾಸವಾದಂತೆ ಕಾಣುತ್ತಿತ್ತು. ಕರಡಿ ಬೈಲಿನಲ್ಲಿ, ಸಾಲ ಸೋಲ ಮಾಡಿದ್ದರಿಂದ ಅವರು ಅಲ್ಲಿ ಯಾರಿಗೂ ತಿಳಿಯದಂತೆ, ಕುಟುಂಬ ಸಮೇತ ರಾತ್ರಿ ರೈಲನ್ನು ಹತ್ತಿ, ಸಾಮಾನು ಸರಂಜಾಮುಗಳೊಂದಿಗೆ ಮುಂಜಾನೆ ಮುಳ್ಳೂರಿನಲ್ಲಿ ಇಳಿದಿದ್ದರು. ತುಪ್ಪದಾಂಜನೇಯ ಸ್ವಾಮಿ ದವಾಖಾನೆಯನ್ನೂ ಸ್ಥಾಪಿಸಿದರು. ಈ ದವಾಖಾನೆಯ ಸ್ಥಾಪನೆಯಿಂದ, ಯಾರಿಗೆ ಯಾವ ಅನುಕೂಲವಾಗದಿದ್ದರೂ, ಮುಳ್ಳೂರಿನ ಒಂದು ವ್ಯಕ್ತಿಗೆ ಸಹಾಯವಾದಂತಾಗಿತ್ತು. ಆ ವ್ಯಕ್ತಿಯೇ ಮದ್ದೂರಾಯ. ಎಲಿಜಿಬಲ್

ಬ್ಯಾಚುಲರ್, ಪೀತಪಲ್ಲಿನ, ಅಸ್ತಮಾರೋಗಿ ಮದ್ದೂರಾಯನಿಗೆ ದವಾಖಾನೆ ಕಾಲ ಕಳೆಯುವ ಒಂದು ತಾಣವಾಯಿತು.

ವೈದ್ಯ ಪುಟ್ಟೂರಾಯರಿಗೂ, ಕೆಲಸವಿಲ್ಲದ ಕುಂಬಾರ ಮದ್ದೂರಾಯನಿಗೂ, ಗಳಸ್ಯ ಕಂಠಸ್ಯವಾಗಲು, ಅವರುಗಳಲ್ಲಿದ್ದ ಸಮಾನಸ್ಕಂಧತೆಯೆ ಕಾರಣವಾಗಿತ್ತೆಂದೇ ನಮ್ಮ ಗುಮಾನಿ. ಮದ್ದೂರಾಯ ಕೆಲಸವಿಲ್ಲದೆ ಪರ್ಮನೆಂಟ್ ನಿರುದ್ಯೋಗಿಯಾಗಿದ್ದ. ಪುಟ್ಟೂರಾಯರಿಗೂ ಪೇಷಂಟುಗಳಿಲ್ಲದೆ ಕೆಲಸವೇ ಇರುತ್ತಿರಲಿಲ್ಲ. ಹೀಗಾಗಿ ಮುಂಜಾನೆಯಿಂದ ರಾತ್ರಿವರೆಗೂ ಊರಿನ ಹಲವಾರು ಸಮಾಚಾರಗಳನ್ನು ಕೆದಕಿಕೊಂಡು, ಇಬ್ಬರೂ ಹರಟಿದ್ದೇ ಹರಟಿದ್ದು. ಅಪ್ಪಿ ತಪ್ಪಿ ಯಾರಾದರೂ ಪೇಷಂಟುಗಳು ಬಂದರೆ, ಆ ಮಟ್ಟಿಗೆ ಧನ್ವಂತರಿಗಳಿಗೆ ಕೆಲಸ ಬೀಳುತ್ತಿತ್ತು. ಅವರು ದೊಡ್ಡ ಗಾಜಿನ ಜಾಡಿಗಳಲ್ಲಿ ತುಂಬಿಸಿಟ್ಟಿರುತ್ತಿದ್ದ ಕೆಂಪು, ಹಸಿರು, ಹಳದಿ ಇತ್ಯಾದಿ ಬಣ್ಣಗಳ ದ್ರಾವಕಗಳಲ್ಲೊಂದನ್ನು ರೋಗಿಗಳು ತಂದಿರುತ್ತಿದ್ದ ಚಿಕ್ಕ ಸೀಸೆಗಳಿಗೆ ಸುರುವಿ, ಅವರು ಕೊಟ್ಟಷ್ಟು ಹಣವನ್ನು ಜೇಬಿಗಿರಿಸಿ, ಕೆಲಸ ಮುಗಿಸುತ್ತಿದ್ದರು. ಅಲ್ಲಿಯತನಕ ಮದ್ದೂರಾಯ ಆಸ್ತಮ ಶಾಂತಿ ಬೀಡಿಯನ್ನು ಹತ್ತಿಸಿಕೊಂಡು, ಸೂರು ನೋಡುತ್ತಾ ಕೂಡುತ್ತಿದ್ದ.

ಧನ್ವಂತರಿ ಪುಟ್ಟೂರಾಯರ ದವಾಖಾನಿಗೆ ಸರ್ಟಿಫಿಕೇಟ್ ಗಿರಾಕಿಗಳೇ ಹೆಚ್ಚಾಗಿ ಬರುತ್ತಿದ್ದರು. ''ಹತ್ತು ದಿನ ಆಫೀಸಿಗೆ ಹೋಗಲಿಲ್ಲ–ಸ್ವಾಮಿ, ಒಂದು ಹತ್ತು ದಿನಕ್ಕೆ ಡಾಕ್ಟರ್ ಸರ್ಟಿಫಿಕೇಟು ಕೊಡಿ. ಹಾಗೆ ಔಷಧಿ, ಇಂಜಕ್ಷನ್ನೂಂತ ಒಂದು ನೂರೈವತ್ತು ರೂಪಾಯಿಗೆ ಬಿಲ್ಲನ್ನೂ ಹಾಕಿಕೊಡಿ'' ಅಂತ ಒಬ್ಬ ಇಸಂ ಬಂದರೆ ಇನ್ನೊಬ್ಬ ''ಯಾಕೋ ಬೇಜಾರಾಯ್ತು ಕಛೇರಿಗೆ ಹೋಗಲಿಲ್ಲ ಡಾಕ್ಟ್ರೆ. ಒಂದು ಐದು ದಿವಸಕ್ಕೆ ಸಿಕ್‌ಲಿವ್ ಸರ್ಟಿಫಿಕೇಟು ಬರ್‍ಕೊಡಿ''ಎಂದು ಹೇಳುತ್ತಿದ್ದ. ಇಂಥಹ ರೋಗವಿಲ್ಲದ ಗಿರಾಕಿಗಳೇ ಪುಟ್ಟೂರಾಯರ ಪೇಷಂಟ್ಸ್‌ಗಳಾಗಿದ್ದರು. ''ರೋಗಿಗಳೇಯಿಲ್ಲದೆ ಕೇವಲ ಸರ್ಟಿಫಿಕೇಟು ಬರೆದು ಕೊಡಲಿಕ್ಕೆ ಇವರು ·ಡಾಕ್ಟರಾದರೇ'' ಎಂಬ ಪ್ರಶ್ನೆ ಮದ್ದೂರಾಯನನ್ನು ಕಾಡುತ್ತಿತ್ತು.

ಒಮ್ಮೆಯಂತೂ ಪುಟ್ಟೂರಾಯರು ಸರ್ಟಿಫಿಕೇಟ್ ಬರೆದು ಕೊಡಲು ಹತ್ತು ರೂಪಾಯಿ ಕೇಳಿದಾಗ, ಆ ಗಿರಾಕಿ ಒಂದೂವರೆ ರೂಪಾಯಿ ಕೊಡುವುದಾಗಿ ಮೊದಲು ಹೇಳಿದ. ಒಂದೂ ಮುಕ್ಕಾಲು, ಎರಡು, ಎರಡೂವರೆ ಎಂದು ಅವನು ಮೊತ್ತವನ್ನು ಏರಿಸುತ್ತಾ ಬಂದ. ಕಡೆಗೆ ಮೂರು ರೂಪಾಯಿ ಮುವತ್ತುಪೈಸೆಗೆ ನಿಲ್ಲಿಸಿದ. ಅಲ್ಲಿಂದ ಮೇಲಕ್ಕೆ ಅವನು ಏರಿಸಲೇ ಇಲ್ಲ. ಧನ್ವಂತರಿಗಳು ಹತ್ತು ರೂಪಾಯಿಯಿಂದ ಕೆಳಕ್ಕಿಳಿಯಲೇ ಇಲ್ಲ. ಈ ಚೌಕಾಸಿ ವ್ಯಾಪಾರವನ್ನು ನೋಡಿ ಮದ್ದೂರಾಯನೂ ಕಸಿವಿಸಿಪಟ್ಟ. ''ಇದೇನು ಸೊಪ್ಪಿನ ವ್ಯಾಪಾರವೇ ಚೌಕಾಸಿ ಮಾಡಲು ಎಂದು ಮದ್ದೂರಾಯ ತಡೆಲಾಗದೆ ಗಿರಾಕಿಗೆ ಹೇಳಿದಾಗ ಅವನು ಸಿಡಿದೆದ್ದ. ''ಏನ್ರಿ, ನನ್ನ ಮೆಡಿಕಲ್ ಟೆಸ್ಟ್ ಮಾಡಿದರೇನ್ರಿ. ಇಲ್ಲಾ ಒಂದು ಔಷಧಿಯೇನಾದ್ರೂ ಕುಡಿದ್ನೆ. ಏನೋ ಒಂದು ಚೂರು ಕಾಗದದಲ್ಲಿ ಬರ್‍ಕೊಡೋಕೆ ಹತ್ತು ರೂಪಾಯಿ ಕೇಳ್ತೀರಲ್ರಿ. ಯಾರ ತಲೆ ಹೊಡೆದು ಸಂಪಾದನೆ ಮಾಡೋಕೆ ಹೊರಟಿದೀರಾ,'' ಎಂದು ಕೆಂಡಾಮಂಡಲವಾಗಿ ಕೂಗಾಡಿದ. ಮಾತೇ ಹೊರಡದೆ

ಮದ್ದೂರಾಯ ಕೆಮ್ಮುತ್ತಾ ಕೂತಾಗ, ವೈದ್ಯರು ಮೂರು ರೂಪಾಯಿ ಮುಪ್ಪತ್ತು ಪೈಸವನ್ನೇ ಜೇಬಿಗಿಳಿಸಿ, ಗಿರಾಕಿಗೊಂದು ಸರ್ಟಿಫಿಕೇಟನ್ನು ಗೀಚಿಕೊಟ್ಟರು. "ನಮ್ಮ ಯೋಗ್ಯತೆ ಏನೂ ಅಂಬೋದು, ಈ ಕ್ಷುಲ್ಲಕ ಮಂದೀಗೆ ಏನು ತಿಳಿಯುತ್ತೆ ಮದ್ದೂರಾವ್, ನೀವು ವೃಥಾ ಕಾಳಜಿ ಮಾಡಬ್ಯಾಡಿ" ಎಂದು ಅವನಿಗೆ ಸಾಂತ್ವನದ ಮಾತನಾಡಿ, ಆಸ್ತಮಾ ಶಾಂತಿ ಬೀಡಿಯನ್ನು ಹಚ್ಚುವಂತೆ ಪ್ರೋತ್ಸಾಹಿಸಿದರು.

ಆ ದಿನ ಅಪರೂಪಕ್ಕೆ ದವಾಖಾನೆಯ ಕಡೆಗೆ ಬರುತ್ತಿದ್ದ ಗಿರಾಕಿಯನ್ನು ನೋಡಿ ಡಾಕ್ಟರು ಸಂಭ್ರಮಪಟ್ಟರು. ಮದ್ದೂರಾಯ ಅವನನ್ನು ನೋಡಿದವನೇ ಹೌಹಾರಿದ, "ಹುಷಾರಾಗಿರಿ ಡಾಕ್ಟ್ರೆ. ಈ ಇಸಂ ಬಹಳ ಡೇಂಜರ‍್ರು" ಎಂದ. ಹುಚ್ಚೂರಾಯರು ಅರ್ಥವಾಗದೆ ಹುಬ್ಬೇರಿಸಿದರು. "ಇವನೇ ಸ್ವಾಮಿ ಕಾಳಿಂಗಯ್ಯ. ಮಹಾಪಟಿಂಗ, ಜಗಳ ಗಂಟಿಗ" ಅಂತ ವಿವರಿಸಿದ. ಆ ವೇಳೆಗೆ ಕಾಳಿಂಗಯ್ಯ ದವಾಖಾನೆಯೊಳಗೇ ಬಂದಿದ್ದ. ಕೈಯಲ್ಲೊಂದು ಸೊರಗಿ ಸೊಪ್ಪಲಾಗಿ, ಕಣ್ಣುಮುಚ್ಚಿದಕೊಂಡಿದ್ದ ಮಗುವನ್ನು ಹೊತ್ತು ತಂದಿದ್ದ. "ಮಗೀಗೆ ಏನಾಗದೋ ವಸಿ ನೋಡಿ, ಒಳ್ಳೆ ಔಷ್ದಿ ಕೊಡಿ" ಅಂದ.

"ಹಿ.ಹಿ.ಹಿ. ಬನ್ನಿ ಕೂಡ್ರಿ ನಾವು ಯಾವಾಗ್ಲೂ ಒಳ್ಳೆ ಔಸ್ದೀನೆ ಕೊಡೋದು. ಗ್ಯಾರಂಟಿ, ಅಪ್ಪಟ ಔಸ್ದಿ ನಮ್ದು... ಎಂದು ಬೆಣ್ಣೆವ್ಯಾಪಾರಿಯಂತೆ ವೈದ್ಯರು ಹೇಳಿ, ಹಳದಿ ದ್ರಾವಕ ತುಂಬಿದ ಗಾಜಿನ ಜಾಡಿಗೆ ಕೈ ಹಾಕಿದರು.

"ನಾನು ಯೋಳಿದ್ದು ತಿಳೀನಿಲ್ವಾ? ಸೂಜಿ ಔಸ್ದಿ ಕೊಟ್ಟು ಜಲ್ದಿ ವಾಸಿ ಮಾಡಿ. ಆ ಕಚಡಾ ನೀರಿನ ಔಷ್ದ ಬ್ಯಾಡಾ"ಅಂದ ಹುಚ್ಚುರಾಯರು ಒಲೆಯ ಮೇಲೆ ನೀರಿಟ್ಟು ಸಿರಂಜನ್ನು ಕುದಿಯುವುದಕ್ಕೆ ಇಟ್ಟರು. "ಮಗೂನ ಹಿಡ್ಕೊಳ್ಳಿ" ಅಂತ ಹೇಳಿ, ದಬ್ಬಳದಂತಿದ್ದ ಸೂಜಿಯನ್ನು ಮಗುವಿನ ತೋಳಿಗೆ ಚುಚ್ಚಿದರು. ಅದು ಅಳುವುದಿರಲಿ 'ಕಮಕ್ ಕಿಮಕ್' ಅನ್ನಲಿಲ್ಲ. ಮದ್ದೂರಾಯನಿಗೆ ಅಚ್ಚರಿ ಜೊತೆಗೆ ಆತಂಕ. ಸೂಜಿ ನೋಡಿದರೇ ಸಾಕು, ಹೆದರಿ ಚೀರಾಡುವ ಮಕ್ಕಳನ್ನ ನೋಡಿದ್ದ ಅವನಿಗೆ, ಈ ಮಗು ಸೂಜಿ ಚುಚ್ಚಿದರೂ ತೆಪ್ಪಗಿರುವುದನ್ನು ಕಂಡು ಅಚ್ಚರಿಯಾಯಿತು. "ಡಾಕ್ಟ್ರು ಕೊಟ್ಟ ಇಂಜಕ್ಷನ್ನಿಂದ ಮಗು ಸತ್ತು ಹೋಗಿರಬಹುದೇ" ಎಂಬ ಆತಂಕವೂ ಅವನಿಗಾಯಿತು. ಮೊದಲೇ ದುಷ್ಟನಾದ ಕಾಳಿಂಗಯ್ಯ ಮಗು ಸತ್ತು ಹೋದರೆ, ಡಾಕ್ಟ್ರನ್ನ ಸುಮ್ನೆ ಬಿಡ್ತಾನೆಯೆ? ಎಂಬ ಚಿಂತೆಯೂ ಕಾಡಿತು. ವೈದ್ಯ ಹುಚ್ಚೂರಾಯರಿಗೂ ಮಗುವಿನ ವರ್ತನೆಯಿಂದ ಸಖೇದಾಶ್ಚರ್ಯವಾಯಿತು. ಆದರೂ ಅವರು ಧೈರ್ಯ ತೆಗೆದುಕೊಂಡು, ಮಗುವಿನ ಕೆನ್ನೆಗೆ ಒಂದೇಟು ಬಾರಿಸಿದರು ಆಗ ಅದು ಚಿಟ್ಟನೆ ಚೀರಿ, ಅಳುವುದಕ್ಕೆ ಪ್ರಾರಂಭಿಸಿತು. ಗೆದ್ದೆ ಎಂದುಕೊಂಡರು ಧನ್ವಂತರಿಗಳು.

ಕಾಳಿಂಗಯ್ಯ ಮಗುವನ್ನು ಹೊತ್ತುಕೊಂಡು ಹೋದ ಮೇಲೆ, ನಿರಾಳವಾಗಿ ಉಸಿರಾಡಿದ ಮದ್ದೂರಾಯ. "ಡಾಕ್ಟ್ರೆ ನೀವು ಕೊಟ್ಟ ಇಂಜಕ್ಷನ್ನಿಂದ ಆ ಮಗು ಗೋತಾ ಹೋಡೀತೆಂದೇ ತಿಳ್ಕೊಂಡಿದ್ದೆ. ಕಾಳಿಂಗಯ್ಯ ನಿಮ್ಮನ್ನೇನು ಮಾಡಿಬಿಡ್ತಾನೋಂತ ಹೆದರಿದ್ದೆ. ಆ ದೇವರೇ ನಿಮ್ಮನ್ನ ಕಾಪಾಡಿದ" ಎಂದು ಹೇಳಿ

ಬೀಡಿಯನ್ನ ಹೊತ್ತಿಸಿದ. "ಇದೇನು ಮಹಾಬಿಡಿ. ಮಿಲ್ಟ್ರೀನಲ್ಲಿದ್ದಾಗ, ನಾನು ಎಂಥೆಂಥಾದ್ದೋ ಕೇಸುಗಳನ್ನ ನೋಡಿದ್ದೀನೆ. ಇಂತಾ ರೌಡಿಗಳನ್ನೂ ಕಂಡಿದ್ದೀನೆ. ಯಾಕೆ, ನಾನು ಸಿಳ್ಳೆಕ್ಯಾತನ ಹಳ್ಳೀಲಿದ್ದಾಗ, ರುಸ್ತುಂ ರೌಡಿ ಖಂಡೇರಾಯನ್ನ ಛಿಂದಿ ಮಾಡಿದ್ದು ನಿಮಗೆ ಹೇಳಿಲ್ಲಾಂತ ಕಾಣುತ್ತೆ. ಎದುರು ಹೋಟೇಲಿಂದ ಒನ್‌ಬೈಟೂ ಕಾಫಿ ತರ್ಸಿ. ಆ ಪ್ರಕರಣಾನು ಹೇಳ್ತೀನಿ, ಕೇಳೋರಂತೆ" ಎಂದು ಹೇಳಿ, ಕಾಫಿಗಾಗಿ ಕಾಯುತ್ತಾ ತಮ್ಮ ಸೀಟಿನಲ್ಲಿ ಕುಳಿತರು ಹುಚ್ಚೂರಾಯರು. ಕಾಫಿಗೆ ಆರ್ಡರು ಕೊಟ್ಟು ಮದ್ದೂರಾಯ, ವೈದ್ಯರ ಮುಂದಿದ್ದ ಕುರ್ಚಿಯಲ್ಲಿ ಕಿವಿ ತೆರೆದು ಕುಳಿತ.

"ಸಿಳ್ಳೆ ಕ್ಯಾತನ ಹಳ್ಳಿ ಎಲ್ಲಿದೇಂತ ಗೊತ್ತೆ?"

"ಯಾರಿಗೆ ಗೊತ್ತು ಡಾಕ್ಟ್ರೆ, ಓತಿಕ್ಯಾತನ ಹಳ್ಳಿ, ಸಿಳ್ಳೇಕ್ಯಾತನ ಹಳ್ಳೀಂತ ಸಾವಿರದೆಂಟು ಹಳ್ಳಿಗಳು ನಮ್ಮಲ್ಲಿವೆ. ಮ್ಯಾಪಿನಲ್ಲಿ ಎಲ್ಲಾದರೂ ಒಂದು ಕಡೆ ಇರಬೇಕು ಬಿಡಿ" ಎಂದ ಮದ್ದೂರಾಯ.

"ಹಾಂಗಲ್ಲಾ ಮದ್ದರಾವ್, ಊರಿನ ವಿಷಯ ಕೇಳುವಾಗ ಊರೆಲ್ಲಿದೆ ಅಂತ ತಿಳಿದಿರೋದು ಒಳ್ಳೇದು. ನಮ್ಮ ಬೆಳಗಾವಿ ಹತ್ತಿರಕ್ಕೆ ಇದೆ. ಆ ಹಳ್ಳಿ, ಹಳ್ಳೀಂತಂದ್ರೆ ತೀರಾ ಕುಗ್ರಾಮವೂ ಅಲ್ಲಾಂತಿಟ್ಟುಕೊಳ್ಳಿ. ಮಿಲ್ಟ್ರಿಯಿಂದ ರಿಟೈರಾದ ಮೇಲೆ ನಾನು ಮೊದಲು ಪ್ರಾಕ್ಟೀಸ್ ಮಾಡಿದ್ದು ಅಲ್ಲೆ. ವ್ಯಾಪಾರವೂ ಸುಮಾರಾಗೇ ಇತ್ತು. ಡಾಕ್ಟರ ಹಸ್ತಗುಣ ಚೆನ್ನಾಗಿದೆ. ಅವರು ಔಷ್ಧಿ ಕೊಡದಿದ್ರು ಖಾಯಿಲೆ ವಾಸಿಯಾಗುತ್ತೆಂತ ಜನ ನಂಬಿದ್ದರು ನೋಡಿ"

"ಹಾಗಿದ್ರೆ ಅಂಥಹ ಊರನ್ನ ಯಾಕೆ ಬಿಟ್ರಿ ಡಾಕ್ಟ್ರೆ?"

"ಅದೇ ಹೇಳ್ತೀನಿ ಕೇಳಿ. ಸಿಳ್ಳೆಕ್ಯಾತನ ಹಳ್ಳೀಲಿ ಖಂಡೇರಾವ್ ಅಂತ ಒಬ್ಬ ಪುಂಡ ಇದ್ದ. ದೊಡ್ಡ ರೌಡಿ. ನೀವೂ ಕೇಳಿರಬಹುದು,"ಎಂದು ಹುಚ್ಚೂರಾಯರು ಹೇಳಿದಾಗ, ಮದ್ದೂರಾಯ ಪ್ರೀತಿನಗೆಯೊಂದನ್ನು ನಕ್ಕ. "ಅಲ್ಲಾ ಡಾಕ್ಟ್ರೆ. ಸಿಳ್ಳೆಕ್ಯಾತನ ಹಳ್ಳಿ ಎಲ್ಲಿಂದೇಂತಾನೆ ನನಗೆ ಗೊತ್ತಿಲ್ಲ. ಇನ್ನು ರೌಡಿ ಖಂಡೇರಾಯನ ವಿಷಯ ಹ್ಯಾಗೆ ತಿಳೀಬೇಕು ಹೇಳಿ"

"ಅಲ್ಲಾ ಅವ ಆ ಪ್ರಾಂತದಲ್ಲೆಲ್ಲಾ ದೊಡ್ಡ ಹೆಸರು ಮಾಡಿದ್ದ. ಚೌಕಳಿ ಬಣ್ಣದ ಇಜಾರು ಹಾಕುತ್ತಿದ್ದ. ರಬಾರಬಿ ಬಣ್ಣದ ಷರಟು ತೊಡುತ್ತಿದ್ದ. ಕತ್ತಿಗೆ ಒಂದು ಹಸುರು ಬಣ್ಣದ ಪಟಾಪಟಿ, ಅಂಗವಸ್ತ್ರವನ್ನು ಕಟ್ಟಿಕೊಂಡಿರುತ್ತಿದ್ದ. ಸೊಂಟಕ್ಕೆ ದಪ್ಪ ಬೆಲ್ಟೊಂದನ್ನು ಬಿಗಿದುಕೊಂಡು, ಅದರಲ್ಲಿ ಒಂದು ಚಾಕುವನ್ನು ಇಟ್ಟುಕೊಂಡಿರುತ್ತಿದ್ದ. ರುಸ್ತುಂ ರೌಡಿಯಾಗಿದ್ದ" ಎಂದು ಹುಚ್ಚೂರಾಯರು ಮಾತನ್ನು ನಿಲ್ಲಿಸಿ, ತಮ್ಮ ಮುಂದಿದ್ದ ಕಾಫಿಯ ಲೋಟಾಗೆ ಕೈಹಚ್ಚಿದರು.

ಮದ್ದೂರಾಯ ಕಾಫಿಯನ್ನು ಕುಡಿದು, ಬೀಡಿಯನ್ನು ಹೊತ್ತಿಸಿಕೊಂಡು ಡಾಕ್ಟರನ್ನೇ ನೋಡುತ್ತಾ ಕುಳಿತ. "ಸರಿ ಮುಂದೆ ಕೇಳಿ. ರೌಡಿ ಖಂಡೇರಾಯನ ಕಂಡ್ರೆ ಆ ಹಳ್ಳೀ ಮಂದಿಯೆಲ್ಲಾ ಮನೆ ಒಳಗೆ ಹೊಕ್ಕೋಳೋವ್ರು. ಅವನ ಉಪಟಳ ತಡೆಯೋಕೆ ಆ ಹಳ್ಳಿಯವರಿಂದ ಸಾಧ್ಯವೇಯಿರಲಿಲ್ಲ"

"ಯಾಕೆ ಪೋಲೀಸಿರಲಿಲ್ವೆ ಆ ಹಳ್ಳೀಲಿ. ಅವರು ಈ ರೌಡೀನ ಬಲಿಹಾಕ್ದೆನೇ ಕಡ್ಲೆಕಾಯಿ ತಿನ್ತಿದ್ದರೆ"

"ಅವರೇನು ಮಾಡ್ತಾರು ಮದ್ದೂರಾವ್. ಖಂಡೇರಾಯ ಆ ಕಡೆ ರಸ್ತೇಲಿ ಇವರು ಈ ಕಡೆ ರಸ್ತೇಲಿ ಹೋಗೋವ್ರು. ಅದೂ ಅಲ್ದೆ ಅವನ ಮೇಲೆ ಕಂಪ್ಲೇಂಟ್ ಬಂದರಲ್ವೆ ಅವರು ಏನಾದ್ರೂ ಮಾಡೋಕೆ. ಅಂತೂ ಖಂಡೇರಾಯನ ಕಾಟ ಅಸಾಧ್ಯವಾಗಿತ್ತು."

"ಅವ ಏನು ಖೂನಿ, ಗೀನಿ ಮಾಡ್ತಿದ್ನೆ?"

"ಹಾಗೆ ಅವ ಮಾಡಿದ್ರೆ ನಿಸೂರಾಗಿ ಬಿಡ್ತಿತ್ತು. ಜೀವಾವಧಿ ಶಿಕ್ಷೇನೋ, ಗಲ್ಲಿನ ಶಿಕ್ಷೇನೋ ಕೊಟ್ಟು ಮುಗಿಸಬಹುದಾಗಿತ್ತು. ಆದರೆ ಇವನ ಕಾಟವೇ ಬ್ಯಾರೆ ತರಹ..."ಎಂದು ಹೇಳಿ ಹುಚ್ಚೂರಾಯರು ನಿಟ್ಟುಸಿರು ಬಿಟ್ಟು, ಮತ್ತೊಂದು ಗುಟುಕು ಕಾಫಿ ಹೀರಿದರು.

"ಅಂದ್ರೆ ನನಗೆ ಅರ್ಥವಾಗಲಿಲ್ಲ" ಮೂಢಮತಿಯಂತೆ ಮದ್ದೂರಾಯ ಪಲುಕಿದ.

"ಅದು ಹ್ಯಾಂಗೆ ಆಗುತ್ತೆ ಮದ್ದೂರಾವ್. ಆ ರೌಡಿ ಮೆಥಡ್ಡೇ ಬ್ಯಾರೆ ತರಹ ಇತ್ತಲ್ಲ. ತರಕಾರಿ ಅಂಗಡಿಗೆ ಹೋದಾಂತ ಇಟ್ಕೊಳ್ಳಿ. ಅಲ್ಲಿ ಕೈಗೆ ಸಿಕ್ಕಿದ ಕಾಯಿಪಲ್ಲೇನೆಲ್ಲಾ ಚೀಲಕ್ಕೆ ತುಂಬ್ಕೊಳ್ಳೋವ್ನು. ಸಿಗರೇಟು ಅಂಗಡೀಲಿ ಸಿಗರೇಟು, ಅಕ್ಕಿ ಮಂಡೀಲಿ ಅಕ್ಕಿ, ಹೀಗೆ ಎಲ್ಲಾ ಚೀಲಕ್ಕೆ ತುಂಬ್ಕೊಂಡು ಹೋಗೋವ್ನು. ಅವನನ್ನ ತಡೆಯೋಕೆ ಯಾರೂ ತಯಾರಿರಲಿಲ್ಲ ಮದ್ರಾವ್"

"ಚೆನ್ನಾಗಿದೆ. ಅವನೇನು ಅಷ್ಟು ಬಲವಾಗಿದ್ನೆ?"

"ರೌಡಿ ಅಂತಂದ್ರೆ ದಪ್ಪಪುಷ್ಟವಾಗಿರಬೇಕೂಂತ ರೂಲ್ಸಿದ್ಯೆ? ಖಂಡೇರಾಯ ನಿಮಗಿಂತ ವೀಕಾಗಿದ್ದ ಅಂದ್ರೆ ನಿಮಗೆ ಆಶ್ಚರ್ಯವಾಗಬಹುದು" ಉಫ್ "ಅಂತ ಉರುಬಿದರೆ ಹಾರಿಹೋಗೋ ಹಾಗಿದ್ದ. ಅವನ ಬಾಡಿಗಿಂತ ಮಂದಿ ಅವನ ಬಾಯಿಗೆ ಹೆದರ್ತಿದ್ರೂಂತ ಇಟ್ಕೊಳ್ಳಿ. ಕುಡಿದ ಅಮಲಿನಲ್ಲೇ ಸದಾ ಇರ್ತಿದ್ದ. ಅವನ ಅವಾಚ್ಯ ಶಬ್ದಗಳಿಂದ ಬಾಯಿಗೆ ಬಂದ ಹಾಗೆ ಕಂಡವರನ್ನೆಲ್ಲಾ ಬಯ್ತಿದ್ದ. ಆಕಸ್ಮಾತ್ ಯಾವನಾರ ಕಂಪ್ಲೇಂಟು ಕೊಟ್ನೋ ಅವನ ಅಂಗಡಿ ಮುಂಗಟ್ಟಿನ ಮೇಲೆ ಕಲ್ಲು, ಮಣ್ಣು ತೂರಿ, ಅವನು ಊಸಿರೆತ್ತದ ಹಾಂಗೆ ಮಾಡ್ತಿದ್ದ. ಕೊಚ್ಚೆ ಮೇಲೆ ಕಲ್ಲು ಯಾಕೆ ಒಗೀಬೇಕೂಂತ ಜನ ಸುಮ್ನಿದ್ದರು ನೋಡಿ"

"ಸರಿಯಾಯ್ತು. ಆಮೇಲೆ?"

"ನನ್ನ ತಂಟೆಗೆ ಮಾತ್ರ ಅವ ಬಂದಿರಲಿಲ್ಲ. ಯಾಕಂದ್ರೆ, ನಮ್ಮ ದವಾಖಾನೇಲಿ ಯಾವ್ದು ತಿನ್ನೂಂತ ಪಥಾರ್ಥ ಇರಲಿಲ್ಲ ನೋಡಿ. ಆದ್ರೂ ಒಂದು ಸಲ ಅವ ನಮ್ಮ ಶಾಪಿಗೂ ಬರಬೇಕಾಗಿ ಬಂತು."

"ಅದ್ಯಾಕೆ ಏನಾದ್ರು ಖಾಯಿಲೆ ಬಿದ್ನೆ?"

''ಮುಂಜಾನೆಯಿಂದ, ಸಂಜೆತನಕ ಕುಡೀತಿದ್ರೆ ಬಾಯಿಲಿ ಬೀಳ್ದೆ ಇರ್ತಾನ್ಯೆ? ಕತ್ತಿಗೆ ಮಫ್ಲರ್ ಸುತ್ಕೊಂಡು, ಸಣ್ಣ ಬಾಟ್ಲಿ ಒಡ್ಕೊಂಡು ಬಂದ. ಬಂದವನೇ ನೀವು ಕೂತಿದ್ದೀರಲ್ಲಾ ಆ ಖುರ್ಚಿಯ ಮೇಲೆ, ಕಾಲ ಮೇಲೆ ಕಾಲು ಹಾಕಿಕೊಂಡು, ಸಿಗರೇಟು ಹಚ್ಚಿ ಹೊಗೆ ಬಿಡುತ್ತಾ ಕೂತ. ಮಾತನಾಡದೆ ಮುಗುಮ್ಮಾಗಿ ಕೂತವನ್ನ ನೋಡಿ ನಾನೇ ಕೇಳಿದೆ. ''ಏನು ಖಂಡೇರಾವ್ ಏನಾಗಿದೆ ನಿಮಗೆ?'' ಅಂತ. ''ಏನಾಗಿದೇಂತ ನಾನು ಹೇಳಿದರೆ ನೀನೆಂತಾ ಡಾಕ್ಟ್ರು. ಪರೀಕ್ಷೆ ಮಾಡಿ ನೀನೆ ಯೋಳು ನನಗೇನಾಗಿದೇಂತ'' ಅಂತ ಸಿಡಿಕಿದ.

''ನನಗೂ ಬಹಳ ಸಿಟ್ಟು ಬಂತು ಮದ್ದೂರಾವ್ ಖಂಡವೇಯಿಲ್ಲದ ಈ ಖಂಡೇರಾಯನ ಜೂರತ್ತು, ನನಗೆ ಕೋಪ ಬರಿಸಿತ್ತು. ಆದ್ರೂ ಅವ ಹೇಳಿ ಕೇಳಿ ರೌಡಿ ಅನ್ನಿಸ್ಕೊಂಡವ್ನು. ಇನ್ನು ದವಾಖಾನೆಯಲ್ಲಿದ್ದ ಸೀಸೆಗಳ್ನ ಒಡೆದು ಹಾಕಿದ್ರೆ ನನ್ನಗತಿ?''

''ಮತ್ತೆ ಏನ್ಮಾಡಿದ್ರಿ?''

''ಮಾಮೂಲಾಗಿ, ಸ್ಟೆತಾಸ್ಕೋಪನ್ನು ಅವನ ಎದೆಯ ಮೇಲಾಡಿಸಿದೆ. ಥರ್ಮಾಮೀಟರನ್ನು ಅವನ ಬಾಯೊಳಗೆ ಇಟ್ಟೆ. ಅವನ ರಟ್ಟೆಗೆ ಬಟ್ಟೆ ಸುತ್ತಿ ಬ್ಲಡ್‌ಪ್ರೆಶರನ್ನ ಅಳೆದೆ.''

''ಏನ್ಲಾ ಒಂದು ಘಂಟೆಯಿಂದ ಪರೀಕ್ಷೆ ಮಾಡ್ತಿದ್ದೀಯಲ್ಲಾ ಇನ್ನೂ ನಿನ್ನ ಪರೀಕ್ಷೆ ಮುಗೀನಿಲ್ವ'' ಅಂತ ಗದರಿಸಿದ.

''ಆಯ್ತು ಮುಗೀತು. ಒಂದು ಸೂಜಿ ಮದ್ದು ಹಾಕಿದ್ರೆ ಸರಿ ಹೋಗುತ್ತೆ'' ಅಂತಂದೆ.

''ಸೂಜಿ ಕಂಡ್ರೆ ಅವನಿಗೆ ಭಯಾಂತ ಕಾಣುತ್ತೆ. ಸೂಜೆಗೀಜಿ ಬ್ಯಾಡ, ಆ ಔಸ್ದೀನ ಈ ಬಾಟ್ಲಿಗೆ ಬುಟ್ಕೊಡು, ಬಾಯಿಗೆ ಸುರ್ಕೋತೀನೀಂತ ಅಂದ. ಸರಿ ನಿಮ್ಮಿಷ್ಟಾಂತ ಹೇಳಿ, ಸೊಪ್ಪು ಸದೆ ಕೂಡಿಸಿ, ಅರೆದು ಮಾಡಿದ್ದ ಕಷಾಯಾನ ಅವನ ಬಾಟ್ಲಿಗೆ ಸುರುವಿ ಅವನನ್ನ ಸಾಗಿಸಿದೆ''

''ಅವ ಔಷಧಿ ಕುಡಿದ್ನೆ. ಅವನ ಬಾಯಿಲಿ ವಾಸಿಯಾಯ್ತೆ?'' ಮದ್ದೂರಾಯ ಕಾತರದಿಂದ ಕೇಳಿದ.

''ಮೂರುದಿನ ಇಸಂ ಪತ್ತೆಯೇ ಇಲ್ಲ. ನಾಲ್ಕನೇ ದಿನ ಪೋಲೀಸು ಪೇದೆಗಳನ್ನ ಕಟ್ಟಿಕೊಂಡು ಧಫೇದಾರ್ರು ಬಂದ್ರು'' ''ಪೋಲೀಸಿನವರೇ ಯಾಕೆ ಬಂದ್ರು?''

''ಹೇಳ್ತೀನಿ ಕೇಳಿ. ಡಾಕ್ಟರ್ ಪುಚ್ಚೂರಾಯರೂಂದ್ರೆ ನೀವೇನೇನ್ರಿ ಅಂತ ದಫೇದಾರ್ರು ಕೇಳಿದರು. ಹೌದು ಸ್ವಾಮಿ ಅಂತಂದೆ. ಅವರು ಅದನ್ನ ಕೇಳಿದ್ದೆ ತಡ, ನನ್ನ ಗಟ್ಟಿಯಾಗಿ ಅಪ್ಪಿಕೊಂಡುಬಿಟ್ರು ಮದ್ದೂರಾವ್. ಮುತ್ತಿಕ್ಕೋದೊಂದು ಬಾಕಿ ನೋಡಿ. ನನಗೋ ಉಸಿರು ಕಟ್ಟೋ ಪರಿಸ್ಥಿತಿ...''

"ಎಲ್ಲಾ ಬಿಟ್ಟು ನಿಮ್ಮನ್ನ ಆಪ್ಪಿಕೊಂಡ್ರೇ. ಯಾಕೆ ಥಫೇದಾರರಿಗೆ ಏನಾದ್ರೂ ದೃಷ್ಟಿದೋಷ ಇತ್ತೆ?"

"ಥಫೇದಾರ್ರು ಹದ್ದಿನ ಕಣ್ಣು ಮದ್ದೂರಾವ್. ಅವರಿಗೆ ನನ್ನ ಕೆಲಸದಿಂದ ಖುಷಿಯಾಗಿ ಅಪ್ಪಿಕೊಂಡ್ರೂಂತನ್ನಿ"

"ಅಂಥ ಕೆಲಸ ನೀವೇನು ಮಾಡಿದ್ರಿ? ಅವರಿಗೂ ಏನಾರ ಔಷಧಿ ಕೊಟ್ಟಿದ್ರೇನು?"

"ಅವರಿಗಲ್ಲ. ಆ ರೌಡಿ ಖಂಡೇರಾಯನ್ನಗೆ ಔಷ್ಧಿ ಕೊಟ್ಟಿರಲಿಲ್ವೆ?"

"ಅದಕ್ಕೂ ಇದಕ್ಕೂ ಏನು ಸಂಬಂಧ ಸ್ವಾಮಿ?" ವಿಷಯ ಅರ್ಥವಾಗದೆ ವಿವರಣೆ ಕೇಳಿದ.

"ನಾನು ಔಷ್ಧಿ ಕೊಟ್ಟೆ ನೋಡಿ. ಅದನ್ನ ಆ ರೌಡಿ ಮುಲಾಜಿಲ್ಲದೆ ಮೂರು ಡೋಸು ಕುಡಿದ ಮೇಲೆ, ಅವನಿಗೆ ಎರಡೂ ಪಾರ್ಶ್ವವೂ ಲಕ್ವ ಹೊಡೆದು ಕೈಕಾಲು ಬಿದ್ದು ಹೋಗಿ, ಬಾಯಿ ಕಟ್ಟಿಹೋಯ್ತು. ಖಂಡೇರಾಯ ಮುಸುಕು ಹೊದ್ದು ಮೂಲೆ ಹಿಡಿದ. ಅದಕ್ಕೆ ಥಫೇದಾರರಿಗೆ ಖುಷಿ. ನಮಗೆಲ್ಲಾ ತಲೆ ನೋವಾಗಿದ್ದ ರೌಡೀನ ಮಲಗಿಸಿ ಬಿಟ್ಟಿರಿ, ಹುಚ್ಚೂರಾವ್. ಪೋಲೀಸು ಖಾತೆಯಷ್ಟೇ ಅಲ್ಲ, ಇಡೀ ಹಳ್ಳೀನೇ ನಿಮ್ಮ ಉಪಕಾರ ಮರೆಯೊ ಹಾಂಗಿಲ್ಲಾಂತ ಅವರು ನನ್ನ ತಾರೀಫು ಮಾಡಿದರು...

"ಆಮೇಲೆ ಖಂಡೆರಾಯ ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳಲಿಲ್ವೆ?"

"ಅಲ್ಲಾ ಮದ್ದೂರಾವ್ ಅವನಿಗಿದ್ದ ಬಲ ಯಾವುದು ಅವನ ಹೊಲಸು ಬಾಯಿ ಅಲ್ವೆ. ಅದೇ ಕಟ್ಟಿಹೋದ ಮೇಲೆ ಇನ್ನು ಯಾರನ್ನ ಬಯ್ಯೋಕೆ ಸಾಧ್ಯ. ಅದೂ ಅಲ್ದೆ ಕೈಕಾಲುಗಳೂ ಬಿದ್ದು ಹೋದ ಮೇಲೆ ಇನ್ನು ಚಾಕು ಹ್ಯಾಗೆ ಹಿಡಿದಾನು ಹೇಳ್ರಿ. ಅವನ್ನ ಕಂಡು ಹಿಂದೆ ಹೆದರ್ತಿದ್ದ ಮಂದಿ ಈಗ ಉಗಿಯೋಕೆ ಶುರು ಹಚ್ಚಿದ್ರೂ ಅನ್ನಿ" ಹಂಗಾದ್ರೆ ನಿಮ್ಗೆ ಆ ಮೇಲೆ ಬೇಜಾನ್ ವ್ಯಾಪಾರ ಆಗಿರಬೇಕಲ್ಲ ಸ್ವಾಮಿ. ಅಂಥಾ ಊರನ್ನ ಬಿಟ್ಟು ಯಾಕೆ ಬಂದ್ರಿ ಮತ್ತೆ..

"ಮದ್ದೂರಾವ್ ಈಗಿನ ಕಾಲ ಯಾವುದು ಹೇಳಿ, ಕಲಿಯುಗ ಅಲ್ವೆ, ಅಂದಮೇಲೆ ಜನಕ್ಕೆ ಕೃತಜ್ಞತೆ ಇರುತ್ತಾ ಹೇಳಿ. ಈಗ ಮಾಡಿದ ಉಪಕಾರನ್ನ, ಇನ್ನೊಂದು ಘಳಿಗೆಗೆ ಮರ್ರೊ ಮಂದಿ ಇರೋವಾಗ ನನಗೇನು ವ್ಯಾಪಾರ ಆಗುತ್ತೆ ಹೇಳಿ. ರೌಡಿ ಖಂಡೇರಾಯ ಔಷಿ ಕುಡ್ದು ಮೂಲೆ ಹಿಡಿದ ಮೇಲೆ, ಯಾವ ಪೇಷಂಟೂ ನನ್ನ ದವಾಖಾನೆ ಕಡೆ ತಲೆಯಿಡಲಿಲ್ಲ ನೋಡಿ. ಅದೂ ಅಲ್ದೆ ಥಫೇದಾರರ ಕಾಟವೂ ಹೆಚ್ಚಾಯಿತು..

"ಅವರ್ಯಾಕೆ ನಿಮ್ಮನ್ನ ಕಾಡಿದರು. ನಿಮ್ಮನ್ನ ತಾರೀಫ್ ಮಾಡಿದ ಇಸಂ ಅಲ್ವೆ..?" ಮದ್ದೂರಾಯ ಅರ್ಥವಾಗದೆ ಕೇಳಿದ

''ಕಾಟ ಅಂತಂದ್ರೆ ಇನ್ನೆಂಥದೂ ಅಲ್ಲ. ಸಿಳ್ಳೆಕ್ಯಾತನ ಹಳ್ಳಿ ಸುತ್ತಮುತ್ತ ಇದ್ದ, ಬೂದಿಕೆರೆ, ಹೊಂಗೆ ಹಳ್ಳಿ ಇವೆಲ್ಲಾ ಧಫೇದಾರರ ಜ್ಯೂರಿಸಿಡಿಕ್ಷನ್‌ಗೆ ಬರ್ತಿದ್ದ ಹಳ್ಳಿಗಳು. ಹಳ್ಳಿಗೊಬ್ಬ ರೌಡಿ ಇದ್ದೇ ಇರ್ತಿದ್ದ ನೋಡಿ. ಧಫೇದಾರ್ರು ಖಂಡೆರಾಯನಿಗೆ ಕೊಟ್ಟ ಔಸ್ದೀನೇ ಇತರೆ ಹಳ್ಳಿ ರೌಡಿಗಳಿಗೂ ಕೊಡೂ ಹಂಗೆ ಪೀಡಿಸುತ್ತಿದ್ರು. ಆದ್ರೆ ಆ ಕಷಾಯದ ಸೊಪ್ಪು ಸದೆಗಳ ಕಾಂಬಿನೇಷನ್ನೇ ನನಗೆ ತಿಳೀವಲ್ದು. ಅದಕ್ಕೇನು ಮಾಡ್ಲಿ. ಇಹಕ್ಕೂ ಇಲ್ಲದ, ಪರಕ್ಕೂ ಇಲ್ಲದ ಊರು ಸಿಳ್ಳೇಕ್ಯಾತನ ಹಳ್ಳಿ ಬಿಟ್ಟು ಆಲದೂರಿಗೆ ಬಂದು ಮೊಕ್ಕಾಂ ಮಾಡಿದೆ ಅನ್ರಿ'' ಎಂದು ಹೇಳಿ ಗ್ಲಾಸಿನಲ್ಲಿದ್ದ ಕಡೆಯ ಗುಟುಕು ಕಾಫಿಯನ್ನ ಸಶಬ್ದವಾಗಿ ಹೀರಿ ಮೇಲೆದ್ದರು.

ಮದ್ದೂರಾಯನೂ ಊಟದ ವೇಳೆಯಾದ್ದರಿಂದ, ಕವಳಧ್ವಂಸನಕ್ಕೆ ತಯಾರಾಗಿ ಗೃಹಾಭಿಮುಖನಾದ.



"ಕ್ರಿಕೆಟ್ ಸ್ಕೋರ್
ಕೇಳ್ತಿದಾರೆ,
ಅಷ್ಟೇ! ಧೈರ್ಯವಾಗಿ
ನಿಲ್ಲಬಹುದು!"

# ಸ್ನೇಹಿತರು

ದೊಡ್ಡರಂಗೇ ಗೌಡ

ಸತ್ಪುರುಷರ ಸಹವಾಸ
ಯಾವತ್ತೂ ಸಂತೋಷ;
ತೇಜೋವಂತರ ಸ್ನೇಹ
ಬದುಕಿಗೆ ಚಂದನದ ಲೇಪ
ಬವಣೆ ಬಡತನಗಳಲಿ
ಸನ್ಮಿತ್ರ ಅನನ್ಯ
ಉಲ್ಲಾಸ ಸೂತ್ರ!
ವಿಷಮ ಸಂದರ್ಭದಲಿ
ಬೇಗೆ ಬೆಂಕಿಗಳಲ್ಲಿ
ಕಿಡಿಗೇಡಿಗಳೆಲ್ಲಾ ಕಾಡುವಲ್ಲಿ
ಕೈ ಹಿಡಿವ ಗೆಳೆಯ
ಆದಾನು ಆತ್ಮೀಯ
ನಿಜಕ್ಕಾ ಅಂಥವನೇ ಸಹೃದಯ!

# ಕವಿಕುಲ ಲಾಮು

**–ಅ.ರಾ.ಸೇ.**

---

## (ಬದುಕು–ಬರಹ)

**ಅ**ಪರಂಜಿಯ ಐವತ್ತೊಂದನೆಯ ಜನ್ಮದಿನೋತ್ಸವ ಸಂಚಿಕೆ ಬರುತ್ತಿರುವ ಈ ಶುಭ ಸಂದರ್ಭದಲ್ಲಿ ಕ್ರಿ.ಶ. ಎರಡುಸಾವಿರದ ಮೂವತ್ತಮೂರನೆಯ ಏಪ್ರಿಲ್ ತಿಂಗಳಲ್ಲಿ, ಕನ್ನಡ ಜನತೆಗೆ ಹೊಸದೊಂದು ಲೇಖನ ಮಾಲೆಯನ್ನು ಸಮರ್ಪಿಸುತ್ತಿದ್ದೇವೆ.

ಇಪ್ಪತ್ತೊಂದನೆಯ ಶತಮಾನದ ಆರಂಭದ ದಶಕದಲ್ಲಿ ಕನ್ನಡ ಜನತೆಗಳು ಓದು ಬರಹಗಳನ್ನೇ ಮರೆತು, ಅಂದಿನ ಬರಹಗಾರರ, ಕವಿಗಳ ವಿಷಯವನ್ನೇ ತಿಳಿಯದಾದರು. ಕೈಗಾ ಅಣುಸ್ಥಾವರದ ನಾಶ, ನಾಡಿನ ಹಿರಿಯ ಜಲಾಶಯಗಳ ಅಂತ್ಯ, ವಿಶ್ವದಾದ್ಯಂತ ವಿಜ್ಞಾನದ, ವಿಜ್ಞಾನಿಗಳ ಕೊನೆಯುಸಿರೆಳೆತಗಳಿಂದ ನಾಡು ತ್ರಸ್ತವಾಯಿತು. ಆಗಲೂ, ಅಪರಂಜಿ ಪ್ರಕಟವಾಗುತ್ತಿತ್ತು. ೨೦೨೦ನೆಯ ವರ್ಷದಲ್ಲಿ ಟಿ.ವಿ.ಯನ್ನು ಬಹಿಷ್ಕರಿಸಿದ ಮೇಲೆ ಮತ್ತೆ ಓದು ಬರಹಗಳು ಪುನರುಜ್ಜೀವನಗೊಂಡವು. ಹಾಸ್ಯಾಸ್ಪದ ಶಾಸ್ತ್ರಗಳನ್ನು ತೆಗೆದುಹಾಕಿ, ಓದು ಬರಹ ಲೆಕ್ಕಾಚಾರಗಳನ್ನು ಎಲ್ಲರಿಗೂ ಕಡ್ಡಾಯವಾಗಿ ಕಲಿಸಿದ ಮೇಲೆ, ಅಪರಂಜಿಯ ಪ್ರಸಾರವೂ ಹೆಚ್ಚಿತು. ಕಳೆದ ದಶಕದಲ್ಲಿ 'ಅಪರಂಜಿ'ನಾಡಿನ ಪ್ರಮುಖ ಪತ್ರಿಕೆಯಾಯಿತು.

ಅಪರಂಜಿಯ ಆರಂಭಕಾಲದಲ್ಲಿ ಕನ್ನಡ ಸಾರಸ್ವತ ಪ್ರಪಂಚ ಹೇಗಿತ್ತು ಎನ್ನುವುದನ್ನು ನಾಡಿನ ಪ್ರಮುಖ ವಿಶ್ವವಿದ್ಯಾನಿಲಯದ ಭಾಷಾ ಸಂಶೋಧನ ಪೀಠವು ಅಧ್ಯಯನ ಮಾಡುತ್ತಿದೆ. ಇದಕ್ಕಾಗಿ ಜಪಾನಿನಿಂದ ಸುಪ್ರಸಿದ್ಧ ವಿದ್ವಾಂಸರೂ, ಸಾಹಿತ್ಯ ಚರಿತ್ರಕಾರರೂ ಆದ ಶ್ರೀ ಸೇಶೇಕು ಕನ್ನಡ ನಾಡಿಗೆ ಬಂದು ನೆಲಸಿದ್ದಾರೆ. ಅವರು ಅಪರಂಜಿಗಾಗಿಬರೆದ ವಿಶೇಷ ಲೇಖನ ಮಾಲೆಯ ಮೊದಲ ಬರಹವಿದು.

**-ಸಂಪಾದಕ.**

---

### ಪ್ರತಿಜ್ಞೆ

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಕನ್ನಡ ಸಾಹಿತ್ಯ ಪ್ರಪಂಚದ ಲೇಖಕರನ್ನು ಕುರಿತು ಬರೆಯುತ್ತೇವೆ.

### ಆಕರ ಸಾಮಗ್ರಿಗಳು

ಭಾರತದ ವಿದ್ವತ್ಪ್ರಪಂಚದ ಉದ್ದೇಶಗಳು ಪೂರ್ಣ ಬದಲಾಗಿರುವ ಇಂದು, ಇಪ್ಪತ್ತನೆಯ ಶತಮಾನದ ಬರಹಗಾರರ ಬಗೆಗೆ ಆಸಕ್ತಿಯೇ ಕುಗ್ಗಿ ಹೋಗಿದೆ. ರಾಷ್ಟ್ರೀಯ ಗ್ರಂಥಾಲಯದ ಕಂಪ್ಯೂಟರ್ ವಿಭಾಗದಲ್ಲಿ ಎರಡು ಸಾವಿರದ ಹತ್ತನೆಯ ವರ್ಷದಲ್ಲಿ ತಗುಲಿದ ವೈರಸ್ ಸೋಂಕಿನಿಂದಲೂ, ವಾತಾವರಣದ ಮಾಲಿನ್ಯದಿಂದಲೂ ಮೈಕ್ರೋ ಫಿಲಂಗಳೆಲ್ಲ ನಾಶವಾಗಿ ಹೋಗಿವೆ. ಇದರಿಂದಾಗಿ ಆ ಕಾಲದ ಯಾವ ದಾಖಲೆಯೂ ಇಲ್ಲವೆಂದು ಗ್ರಹಿಸಲಾಗಿದೆ.

ಗ್ರಂಥಾಲಯದಲ್ಲಿ ಇದುವರೆಗೂ ಬಾಗಿಲು ತೆರೆಯದ ಮೂರು ಕಿ.ಮೀ. ಉದ್ದ ಒಂದು ಕಿ.ಮೀ. ಅಗಲದ ಷೆಡ್ ಒಂದಿದೆ. ವಿಶೇಷ ಪರವಾನಿಗಿ ಪಡೆದು ಅದನ್ನು ತೆಗೆಸಿ ನೋಡಿದಾಗ ಅದರ ಬಹು ಭಾಗವನ್ನು ತುಂಬಿದ್ದ ಪುಸ್ತಕ, ಕಡತಗಳು ಮಣ್ಣಾಗಿರುವುದು ಕಂಡು ಬಂತು.

ಉಳಿದುಕೊಂಡ ಹಾಳೆಗಳ ಕಟ್ಟಿನಲ್ಲಿ ಕನ್ನಡ ಲಿಪಿಯಿರುವ ಕಟ್ಟೊಂದನ್ನು ತೆಗೆದು ಅದರ ಆಧಾರದಿಂದ ಈ ಲೇಖನ ಬರೆದಿದ್ದೇವೆ.

### ಕಟ್ಟಿನ ವರ್ಣನೆ

ಕಟ್ಟಿನ ಉದ್ದ ೩೫ ಸೆಂ.ಮೀ., ಅಗಲ ೨೯.೫. ಸೆಂ.ಮೀ., ದಪ್ಪ ೧೦೦ ಸೆಂ.ಮೀ. ಮೇಲೆ ಕನ್ನಡ ವೃತ್ತ ಪತ್ರಿಕೆಯ ಹರಿದ ಹಾಳೆ. ಬಿಳಿ ಕಾಗದದಲ್ಲಿ ಕವಿಕುಲ ಲಾಮ (?) ಎಂದು ಬರೆದು ಅಂಟಿಸಿದೆ. ಹಳೆಯ ಸಣಬಿನ ಹುರಿಯಿಂದ ಕಟ್ಟಿದೆ.

### ಕವಿಕುಲ ಲಾಮನು ಗಂಡಸೇ

ಲಾಮನಾದುದರಂದ ಗಂಡಸೇ ಇರಬೇಕು.

### ಕವಿಯ ಮತ

ಇವನು ಬೌದ್ಧನಿರಬೇಕು. ಆದರೆ ಒಂದು ಪದ್ಯದಲ್ಲಿ 'ದಾನವಾಂತಕ ಕೃಷ್ಣ' ಎಂದು ಬರೆದಿದ್ದಾನೆ. ಇದರಿಂದ ಇವನು ಪರಮ ವೈಷ್ಣವನಿರಬೇಕು ಎಂಬ ಅನುಮಾನ ಬರುತ್ತದೆ.

ಈ ಪದ್ಯಭಾಗವನ್ನು ಓದಿ:

ದಾನವಾಂತಕ ಕೃಷ್ಣ ನೀನಿಂದು ಬಂದು
ತೆಗೆದರಾಸೆಯ ತಲೆಯ ಮೃಗಮದದ ಕೊಂಬು
ತಂದವನ ಮೆದುಳಿನಲಿ ಹಾಸ್ಯವನು ತುಂಬು

ಇದರಿಂದ ಕವಿಕುಲ ಲಾಮನು ದರಾಸೆ ಎಂಬ ಕೋಡುಳ್ಳ ಪ್ರಾಣಿಯು (ಮನುಷ್ಯನ?) ತಲೆಯಲ್ಲಿ ಹಾಸ್ಯವಿರಲಿಲ್ಲ ಎಂದು ಮಾತ್ರ ಹೇಳಿದ್ದಾನೆ ಎನ್ನುವುದು ಸ್ಪಷ್ಟ. ದರಾಸೆ ಎಂದರೇನು? ಸ್ಪಷ್ಟವಾಗಿಲ್ಲ. ಅದರ (ಅವನ?) ತಲೆಯಲ್ಲಿ ಹಾಸ್ಯವನ್ನು ತುಂಬು ಎಂದು ಕವಿಯು ಕೃಷ್ಣನ್ನು ಪ್ರಾರ್ಥಿಸಿದ್ದಾನೆ. ಆದರೆ ಇದನ್ನು ಕವಿಕುಲ ಲಾಮನು ಬರೆದನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಈ ಹಾಳೆ ಆ ಕಟ್ಟಿನಲ್ಲಿದೆ ಅಷ್ಟೇ.

ಈ ಕಟ್ಟಿನಲ್ಲಿರುವ ಕೆಲವು ಕೈ ಬರಹದ ಹಾಳೆಗಳಲ್ಲಿ 'ಶಿವನೇ ಶಂಕರಲಿಂಗ' ಎಂದು ಮತ್ತೆ ಮತ್ತೆ ಬರೆದಿದೆ.

ಆದ್ದರಿಂದ ಕವಿಯು ಶೈವನಾಗಿರಬೇಕು ಎಂದೂ ಸಿದ್ಧವಾಗುತ್ತದೆ.

ಲಭ್ಯವಿರುವ ಇನ್ನೊಂದು ಪದ್ಯದಲ್ಲಿ

ನೀ ತ್ಯಜಿಸು ದೈವವನು ಎಂದೊಬ್ಬ ಮತ್ತೊಬ್ಬ
ನಾ ವಿಧಿಯ ಪರಿಹರಿಸಲಳವಲ್ಲವೆನುವ
ಆರನುಡಿ ನಿಜವೊ ಅದನಾರು ಬಲ್ಲರು ಚೆಲುವೆ
ತಾರ ಬಿಸಿಬಿಸಿ ಕಾಫಿ.........

ಎಂದು ಬರೆದಿರುವುದು ಕಂಡುಬರುತ್ತದೆ. ಇದರಿಂದ ಅವನು ನಾಸ್ತಿಕರ, ವಿಧಿವಾದಿಗಳ ಪರಿಚಯವುಳ್ಳವನು. ಅವರ ಮಾತು ನಿಜವೋ ಸುಳ್ಳೋ ಎಂದು ತಿಳಿಯಲು ಅವನು ಅಸಮರ್ಥನಾಗಿದ್ದ. ಅದಕ್ಕಾಗಿ ಚೆಲುವೆಯೊಬ್ಬಳನ್ನು ಕಾಫಿ ಕೊಡು ಎಂದು ಕೇಳಿದ್ದ ಎನ್ನುವುದು ತಿಳಿದುಬರುತ್ತದೆ.

**ಕವಿಯ ಕಾಲ**

ಈ ಕವಿಯು ಬರೆದಿರುವನೆಂದು ಭಾವಿಸಿ ಒಟ್ಟುಗೂಡಿಸಿರುವ ಈ ಹಾಳೆಗಳ ಕಟ್ಟಿನಲ್ಲಿ ಅಚ್ಚಾದ ಹಾಳೆಗಳು ಇರುವುದರಿಂದ ಈ ಕವಿಯು ಮುದ್ರಣ ಯಂತ್ರದ ಸಂಶೋಧನೆಯಾದ ಮೇಲೆ ಹುಟ್ಟಿರಬೇಕು ಎನ್ನುವುದನ್ನು ಒಪ್ಪಿಕೊಳ್ಳಬೇಕು. ಚೀನಾ ದೇಶದಲ್ಲಿ ಐದು ಸಾವಿರ ವರ್ಷಗಳ ಹಿಂದೆಯೇ ಮುದ್ರಣ ಯಂತ್ರವನ್ನು ಕಂಡುಹಿಡಿದರಷ್ಟೇ. ಆದುದರಿಂದ ಕ್ರಿಸ್ತ ಪೂರ್ವ 3850 ರಲ್ಲಿ ಕವಿಯು ಹುಟ್ಟಿರುವ ಸಾಧ್ಯತೆಗಳಿವೆ. ಇವನು ಶ್ರೀಕೃಷ್ಣನ ಭಕ್ತನಾದುದರಿಂದ ಹಿಲಿಯೋಡೋರಸ್‌ನ ಸಮಕಾಲೀನನಾಗಿದ್ದಿರಬಹುದು.

ಆದರೆ ಈ ಕವಿಯು ಬರೆದಿರುವ ಈ ಹಿಂದೆ ಉದ್ಧರಿಸಿರುವ ಪದ್ಯದಲ್ಲಿ ಉಮರ್‌ಖಯಾಮನ ರುಬಾಯಿಗಳ ಛಾಯೆಯಿದೆ. ಕವಿಯ ಇನ್ನೊಂದು ಲೇಖನದಲ್ಲಿ ಪರ್ಷಿಯನ್, ಅರೆಬಿಕ್ ಪದಗಳಿವೆ.

ಇದರಿಂದ ಕವಿಯು ಉಮರ್‌ಖಯಾಮನ ಸಮಕಾಲೀನನಾಗಿ ಪರ್ಷಿಯಾದಲ್ಲಿ ಜೀವಿಸಿದ್ದಿರಬಹುದು. ಇದರಿಂದ ಕನ್ನಡವು ಪರ್ಷಿಯಾದವರೆಗೂ ಹಬ್ಬಿತ್ತು ಎಂದೂ ತಿಳಿಯಬಹುದು.

ಆದರೆ ಇವನ ಕಟ್ಟಿನಲ್ಲಿ ಸಿಕ್ಕುವ ಒಂದಾನೊಂದು ಲೇಖನದಲ್ಲಿ ಐನ್‌ಸ್ಟೀನ್ ಎಂಬ ಹೆಸರು ಕಂಡುಬಂದಿರುವುದರಿಂದ, ಇವನು ಸುಮಾರು ಒಂದುನೂರಾ ಇಪ್ಪತ್ತು ವರ್ಷಗಳ ಹಿಂದೆ ಜೀವಿಸಿದ್ದಿರಬೇಕು.

'ಸಂದುದಿಂದಿಗೆ ಅರ್ಧ ಶತಮಾನ' ಎಂಬ ಸಾಲನ್ನು ಗಮನಿಸಿದರೆ ಇವನು ೧೯೫೦ರ ಹೊತ್ತಿಗೆ ಪದ ಬರೆಯುವ ಚಟಕ್ಕೆ ಒಳಗಾಗಿದ್ದನೆಂದು ಖಚಿತವಾಗಿ ನಿರ್ಧರಿಸಬಹುದು.

## ಸಮಕಾಲೀನ ಪ್ರಭಾವಗಳು

ಕ್ರಿ.ಶ. ಇಪ್ಪತ್ತನೆಯ ಶತಮಾನವು ಮಾನವ ಕುಲದ ವಿಚಾರದ ಉತ್ಕರ್ಷಕ್ಕೆ ಒಂದು ಜ್ವಲಂತ ಸಾಕ್ಷಿಯಾಗಿತ್ತು.

ಆಗ ಭಾರತದಲ್ಲಿ, ವಿಶೇಷವಾಗಿ ಕನ್ನಡನಾಡಿನಲ್ಲಿ ಸಮಯಸಾಧಕತೆಯನ್ನೇ ಪ್ರಗತಿ ಎಂದು ಭಾವಿಸಿದ್ದರೆಂದು ಇತಿಹಾಸಕಾರರು ಸ್ಪಷ್ಟವಾಗಿ ಉಲ್ಲೇಖಿಸುತ್ತಿರುವುದನ್ನು ಗಮನಿಸಿ. ಈ ಮಾತುಗಳನ್ನು ಗಮನಿಸಿ.

''ಕನ್ನಡ ಲೇಖಕರು, ಮೊದ ಮೊದಲು ರೊಮ್ಯಾಂಟಿಸಿಸಂ ಎಂಬ ರೋಗಕ್ಕೆ ಪಕ್ಕಾಗಿದ್ದರು. ಇದು ರುಮ್ಯಾಟಿಸಂ ಪದಕ್ಕೆ ಪರ್ಯಾಯ ಎಂದು ಭಾವಿಸದಿರಿ. ಬಳಿಕ ಮಾಡರ್ನಿಟಿ ಅಥವಾ ಆಧುನಿಕತೆಯನ್ನು ಮೊರೆ ಹೊಕ್ಕರು. ಇವೆರಡಕ್ಕು ಭಾರತದ ಪರಂಪರೆಗೂ ಸಂಬಂಧವೇ ಇಲ್ಲವೆಂಬುದನ್ನು ಅವರು ಗಮನಿಸಲೇ ಇಲ್ಲ. ತರುವಾಯ ಸಪ್ಪಿಡಿ ಬರುವ ಬರಹದ ಪ್ರಕಾರಗಳನ್ನೇ ಅವರು ಗಮನಿಸತೊಡಗಿದರು.

ಶತಮಾನದ ಅಂತ್ಯದ ವೇಳೆಗೆ ಸಾಹಿತ್ಯವು ಛಿದ್ರ ಛಿದ್ರವಾದ ಬಣಗಳಿಂದ ಕೂಡಿ, ಯಾವ ತಳಹದಿಯೂ ಇಲ್ಲದ, ಭಾರತದ ಅನಕ್ಷರಸ್ತ ವಿದ್ಯಾವಂತರಿಗೆ ತಿಳಿಯದ, ಮೂಲಗಳಿಂದ ಮಾಡಿದ ಛಿದ್ರೀಕರಣ ಬರಹಗಳಿಂದ ತುಂಬಿತ್ತು.

ವಿಶ್ವವಿದ್ಯಾಲಯಗಳ ಅಧ್ಯಾಪಕರು, ಮತೀಯ ಮುಖಂಡರು ಕ್ರಾಂತಿ ಎಂದು ಬೊಬ್ಬೆ ಇಡುತ್ತಿದ್ದರು. ಅವರಿಗೆ ಭಾರತ ಒಂದು ಅಮೂರ್ತ ಕಲ್ಪನೆ ಎನಿಸಿತು.

ಇನ್ನೂ ಒಂದು ಕುತೂಹಲಕಾರಿ ಬೆಳವಣಿಗೆ ಎಂದರೆ, ಭಾರತವನ್ನು ಜಾತ್ಯಾತೀತ ರಾಷ್ಟ್ರ ಎನ್ನುತ್ತಿದ್ದರು. ಇದರಿಂದ ಜಾತಿ ಉಪಜಾತಿಗಳ ಸಂಖ್ಯೆಯು ಮುವತ್ತು ಸಾವಿರಕ್ಕೆ ಮಿಕ್ಕಿತು. ಇದಕ್ಕೆ ದೃಷ್ಟಾಂತ ಬೈಬಲಿನ ಬ್ಯಾಬೆಲ್ ಗೋಪುರ ಒಂದೇ. ಇದೆಲ್ಲದರ ನಡುವೆ ಭಾರತೀಯ ಪರಂಪರೆ ಎಂದಿನಂತೆ ಉಳಿದುಕೊಂಡಿತ್ತು. ಉದ್ಧಾರಕರು ಎಂದರೆ ಛತ್ರಿಗಳೆಂದೇ ಅರ್ಥವಿದ್ದರೂ, ಹಾಗೆ ಹೇಳುವಷ್ಟು ಶಕ್ತಿ ಜನಸಾಮಾನ್ಯರಲ್ಲಿ ಉಳಿದಿರಲಿಲ್ಲ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿ ಅಪೂರ್ವವಾದ ಬೆಳವಣಿಗೆಯೊಂದು ಉಂಟಾಯಿತು. (೧) ಜನತೆಯನ್ನು ಉದ್ಧರಿಸಲೆಂದು

ಕಂಕಣಬದ್ಧರಾದ ರಾಜಕಾರಣಿಗಳು (೨) ಸಮತೆಯನ್ನು ತರಲೆಂದು, ಸಾಹಿತ್ಯವನ್ನು ಬೀದಿಗೆಳೆಯಲೆಂದು, ಅನುವಾದ ಬರಹಗಾರರು, (೩) ಶೋಷಣೆಯನ್ನು ಕೊನೆಗಣಿಸಲೆಂದು ಕಟಿಬದ್ಧರಾದ ಮುಖಂಡರು ಹುಟ್ಟಿಕೊಂಡು ಭಾರೀ ಭಾರೀ ಬಂಗಲೆಗಳನ್ನು ಕಟ್ಟಿಸಿದರು. ಎಸ್ಟೇಟುಗಳನ್ನು ಕೊಂಡರು, ಸ್ವಂತ ಮನೆಗಳಿದ್ದರೂ ಬಾಡಿಗೆ ಮನೆಗಳನ್ನು ಹಿಡಿದರು, ಬ್ಯಾಂಕುಗಳಲ್ಲಿ ಕಪ್ಪು ಹಣ ಇಟ್ಟರು. ಇವರೆಲ್ಲರ ಏಳಿಗೆಗಾಗಿ ಜನಸಾಮಾನ್ಯರು ಮುರುಕು ಮನೆಗಳಲ್ಲಿ ವಾಸವಾಗಿ, ಅರೆ, ಕಾಲು, ಎಂಟನೇ ಒಂದು ಹೊಟ್ಟೆಗೂ ಸಾಕಾಗದಷ್ಟು ಆಹಾರ ಸೇವಿಸುತ್ತಾ ಚಿಂದಿ ಬಟ್ಟೆಯನ್ನೇ ತೊಟ್ಟು ತಾಗ ಜೀವನವನ್ನು ನಡೆಸುತ್ತಿದ್ದರು.''

ಮೇಲ್ಕಂಡ ಬರಹವನ್ನು ಸ್ಲೊಬೊಡಾನ್ ಸ್ಕೋಡಾ ಎಂಬ ಇತಿಹಾಸಜ್ಞನ ಗ್ರಂಥದಿಂದ ಉದಾಹರಿಸಿದ್ದೇವೆ.

## ಕವಿಯ ಉದ್ಯೋಗ

ಮಾಡಲು ಬದುಕಿದ್ದವರು ಕವನ, ಕತೆ ಇತಾದಿಗಳನ್ನು ಬರೆಯಲು ಹೋಗುವುದಿಲ್ಲ. ಆದ್ದರಿಂದ ಕವಿಕುಲ ಲಾಮನಿಗೆ ಯಾವ ಉದ್ಯೋಗವೂ ಇರಲಿಲ್ಲ.

## ಕೃತಿಗಳು

೧. ನಮಗೆ ದೊರೆತಿರೆವ ಕಟ್ಟಿನಲ್ಲಿ ಹೀಗೊಂದು ಪದ್ಯವಿದೆ.

ಹಬ್ಬಿದೆ ವ್ಯಾಪಾರದ ಕರಿಬಳ್ಳಿ
ಚೌಕೀ ಪೇಟೆಯ ಬೆಲ್ಲದ ಮಂಡಿ
ಅಲ್ಲಿರುವನು ಇದರಾಧರು ಕೊಂಡಿ.

ಇದರಿಂದ ಕವಿಕುಲ ಲಾಮನು ಯಾವುದೋ ಊರಿನ ಚೌಕೀ ಪೇಟೆಯ ಬೆಲ್ಲದ ಮಂಡಿಯಲ್ಲಿದ್ದನು ಎಂದು ತಿಳಿಯುತ್ತದೆ. ಕೊಂಡಿ ಎಂದರ ಕೊಕ್ಕೆ ಎಂದು ಕಲ್ಪಿಸಿದರೆ ಇವನು ಬೆಲ್ಲದ ಮಂಡಿಯ ವ್ಯಾಪಾರವನ್ನು ಕುರಿತು ಒಂದು ಕಾವವನ್ನು ಬರೆದಿರಬೇಕು.

ಎಸೆಯುವ ಟೆಲಿಫೋನು ಟ್ರಿಂಟ್ರಿಂಟ್ರಿಣೀರೆನೆ
ಮುಸುಗುವ ಲಾರಿಯು ಘೊರ್ರ ಕೊರಕ್ಕನೆ
ಬೆಲ್ಲದ ಕೆಳಗೆ ಹಮಾಲನು ಬಿದ್ದಿರೆ
ಗಲ್ಲಿಯ ಕಡೆಗೆ ಗುಮಾಸ್ತನು ಗುದ್ದಿರೆ.

ಇದೊಂದೇ ಈ ಕಾವ್ಯದ ಉಪಲಬ್ಧವಾದ ತುಂಡು. ಪೂರಾ ಹರಿದು ಹೋಗಿರುವ ಇನ್ನೊಂದು ಹಾಳೆಯಲ್ಲಿ 'ಸೇಂಗಾ ಸೊಟ್ಟಿ ಸೀಜಿನ ಚಾಲೂ ಅದೆ' ಎಂಬ ಗದ ದೊರೆಯುತ್ತದೆ.

ಇದರಿಂದ ಈ ಬೆಲ್ಲದ ವ್ಯಾಪಾರದ ಕೃತಿ ಚಂಪೂ ಕಾವ್ಯವಾಗಿರಬೇಕು. ಹೆಸರು ಗೊತ್ತಿಲ್ಲ.

೨. ನಾಲ್ಕೈದು ಹಾಳೆಗಳ ಒಂದು ಸರಣಿಯಲ್ಲಿ ಒಂದು ಕತೆ ಅರೆಬರೆ ಕಾಣುತ್ತದೆ. ಅದನ್ನು ಹೀಗೆ ಸಂಗ್ರಹವಾಗಿ ತಿಳಿಸಬಹುದು.

''ನಿರೂಪಕನ ಜೊತೆಗಾರ ಹೋಟಲೊಂದಕ್ಕೆ ಬೆಂಕಿಯಿಡುತ್ತಾನೆ. ನಿರೂಪಕನು ಒಳಗಡೆಯ ಕೋಣೆಗೆ ಹೋದಾಗ ವಿದ್ಯುತ್ ಆರುತ್ತದೆ. ಅವನು ಏನನ್ನೋ ಎಡವುತ್ತಾನೆ. ವಿದ್ಯುತ್ ಬರುತ್ತದೆ. ಅವನು ಎಡವಿದ್ದುದು ಒಬ್ಬ ಅನುಪಮ ಸುಂದರಿ. ಕಿಟಕಿಯಲ್ಲಿ ಹಿಮ ಮಾನವನೊಬ್ಬ ಇಣುಕುತ್ತಾನೆ''

ಇದು ಪತ್ತೇದಾರಿ ಅಥವಾ ಥ್ರಿಲ್ಲರ್ ಇರಬೇಕು. ಯಾವುದೇ ವಿದೇಶಿ ಪತ್ತೇದಾರಿಯ ಕೃತಿ ಚೌರ್ಯವಿರಬಹುದೇ ಎನ್ನುವುದು ಚರ್ಚೆಗೆ ಅರ್ಹವಾದದ್ದು.

ಆದರೆ ಈ ಕೃತಿ ಕವಿಕುಲ ಲಾಮನದೇ ಎಂದು ಸಿದ್ಧಪಡಿಸಲು ಯಾವ ಆಧಾರವೂ ಇಲ್ಲ.

೩. ಈ ಕಟ್ಟಿನಲ್ಲಿ ಸಿಕ್ಕುವ ಇನ್ನು ಕೆಲವು ಹಾಳೆಗಳಲ್ಲಿ ಮಾಂಡೂಕ್ಯೋಪನಿಷತ್ತಿನ ಶಾಂತಂ ಶಿವಮದ್ವೈತಂ......ಎನ್ನುವ ತುರೀಯಾವಸ್ಥೆಯನ್ನು ಸರಳವಾಗಿ ಪ್ರತಿಪಾದಿಸಿದೆ. ಇದರಿಂದ ಕವಿಕುಲಲಾಮನು ವೇದಾಂತವನ್ನು ಬಲ್ಲವನೆಂದು ಹೇಳಲು ಅವಕಾಶವಿದೆ.

೪. ಆದರೆ ಕೊನೆಯ ಹಾಳೆಯಲ್ಲಿ ಮೇಲೊಬ್ಬ ತರುಣಿಯ ಚಿತ್ರವನ್ನು ಮುದ್ರಿಸಿ

ರೂಪಸೀ

ಹೃದಯ ತಾಪಸೀ

ಸೌಂದರ್ಯ ರಾಶಿ

ನಾನಿನ್ನ ಚಪ್ರಾಸಿ

ಎಂಬ ಪದ್ಯವನ್ನು ಮುದ್ರಿಸಿದೆ. ಅದರ ಕವಿ ಕವಿಕುಲ ಲಾಮನೆಂದೂ ಮುದ್ರಿಸಿದೆ. ಅದು 'ಅಪರಂಜಿ'ಯ ಒಂದು ಪುಟ ಎಂದೂ ತಿಳಿಯುತ್ತದೆ.

ಇದರಿಂದ ಕವಿಕುಲ ಲಾಮನು ಅಪರಂಜಿಯ ಲೇಖಕನೆಂದೂ, ಸೌಂದರ್ಯರಾಶಿಯಾಗಿದ್ದ ಒಬ್ಬ ರೂಪಸಿಯ ಚಪ್ರಾಸಿಯೆಂದೂ, ಅವನ ಹೃದಯಕ್ಕೆ ತಾಪವಾಗಿತ್ತೆಂದೂ ನಿರ್ವಿವಾದವಾಗಿ ಹೇಳಬಹುದು.

**ಮಂಗಳ**

ಹಾಳೆಗಳ ಕಟ್ಟಿನಲ್ಲಿ ಕಂಡುಬರುವ ಕೆಲವು ಪದ್ಯಗಳು ಮಾಸಿಹೋಗಿವೆ. ಆದರೆ ಅವುಗಳ ಮೇಲೆ, ಆ ಗೀತೆಗಳನ್ನು ಹಾಡುವ ರಾಗಗಳನ್ನು ನಮೂದಿಸಿದೆ.

ಉದಾ: ಕದನ ಕುತೂಹಲ, ಕೊಳಾಳಿ ಬಿಂಜಾಳಿ, ಕುಕ್ಕುಟ ಸಂಜೀವಿನಿ ಇತ್ಯಾದಿ. ಇದರಿಂದ ಕವಿಕುಲ ಲಾಮನು ಸಂಗೀತಗಾರನಾಗಿರಬೇಕೆಂಬ ಅನುಮಾನವುಂಟಾಗುತ್ತದೆ. ಕದನ ಕುತೂಹಲವನ್ನು ಬಿಟ್ಟರೆ ಉಳಿದ ರಾಗಗಳು ಯಾವ ಸಂಗೀತ ಪದ್ಧತಿಯಲ್ಲೂ ಇಲ್ಲ. ಕವಿಯು ಕುಕ್ಕುಟ ಸಂಜೀವಿನಿ ರಾಗವನ್ನು ಆಲಾಪಿಸಿದಾಗ ಕಲ್ಲು ಕೋಳಿಯು ಕೂಗಿತೆಂದೂ, ಹಂಪೆಯ ಕಲ್ಲಿನ ತೇರು ಹರಿಯಿತೆಂದೂ ಒಂದು ದಂತಕತೆ ಇದ್ದಿದ್ದರೆ ಚೆನ್ನಾಗಿತ್ತು.

# ಆಯುಧ ಪೂಜೆ

–ಸೀ.ಆರ್.ಸತ್ಯ

ನಮ್ಮ ವಠಾರದಲ್ಲೇ ವಾಸಿಗಳಾದ ನಂಜುಂಡ ಶಾಸ್ತ್ರಿಗಳು ಈಚೀಚೆಗೆ ಮನೆ ಬಿಟ್ಟು ಹೊರಗೇ ಬಂದಿರಲಿಲ್ಲ. ಅವರ ಮನೆಯ ದಿಕ್ಕಿನಿಂದ ಅವರಾಡೋ ಮಾತು ಕೂಡ ಕೇಳಬರದೇ ಇದ್ದರಿಂದ ನನಗೆ ಸ್ವಲ್ಪ ಗಾಬರಿಯೇ ಆಯಿತು. ಏನು ವಿಷಯವೋ ವಿಚಾರಿಸೋಣ ಅಂತ ಶಾಸ್ತ್ರಿಗಳ ಮನೆ ಬಾಗಿಲು ತಟ್ಟಿದೆ. ಅವರ ಹೆಂಡತಿ ಬಾಗಿಲು ತೆಗೆದು ನನ್ನ ನೋಡಿ ಬಿಕ್ಕಿ ಬಿಕ್ಕಿ ಅತ್ತರು.

"ಏನು ಹೇಳಲಪ್ಪ. ಕಳೆದ ಆಯುಧ ಪೂಜೆಯ ದಿನದಿಂದ ಮಾತೇ ಬಿಟ್ಟಿಟ್ಟಿದ್ದಾರೆ. ಮೂಲೇಲಿ ಯಾವಾಗಲೂ ಮಂಕಾಗಿ ಕೂತಿರ್ತಾರೆ. ನಾನು ಇನ್ನು ಮೇಲಿಂದ ಯಾವ ಪೂಜೆ ಪುನಸ್ಕಾರಗಳನ್ನೂ ಮಾಡಿಸೋದಿಲ್ಲ ಅಂತ ಒಂದೆರಡು ಸಲ ಬಾಯಿಬಿಟ್ಟು ಕೂಗಿದರು ಅಷ್ಟೆ. ಪುರೋಹಿತರು ಅಂತ ಅನ್ನಿಸಿಕೊಂಡು ಪೂಜೆಯೇ ಮಾಡಿಸೋಲ್ಲ ಅಂತ ಹಠ ಹಿಡಿದರೆ, ನಮ್ಮ ಹೊಟ್ಟೆಪಾಡು ಹ್ಯಾಗಪ್ಪಾ?" ಅಂತ ಆಕೆ ಗೋಗರೆದರು.

"ಏನು ವಿಷಯ ಶಾಸ್ತ್ರಿಗಳೇ? ಹೆದರಬೇಡಿ ಹೇಳಿ" ಅಂತ ಶಾಸ್ತ್ರಿಗಳನ್ನ ಹಾಗೇ ಪುಸಲಾಯಸಿದೆ. ಅವರು ತಮ್ಮ ಪೆಚ್ಚು ಮುಖವನ್ನ ಎತ್ತಿ ನನ್ನನ್ನೇ ದೃಷ್ಟಿಸಿದರು. ತಮ್ಮ ಕೈ ಬೆರಳಿಂದ ಅಲ್ಲೇ ಟೇಬಲ್ ಮೇಲೆ ತೋರಿಸಿದರು. ಅಲ್ಲೊಂದು ಡೈರಿ ಇತ್ತು. ಓದು ಓದು ಅಂತ ಸಂಜ್ಞೆ ಮಾಡಿದರು ಶಾಸ್ತ್ರಿಗಳು. ಡೈರಿ ಬರೆಯೋ ಅಭ್ಯಾಸ ಬ್ರಿಟಿಷರೊಡನೆ 1947ನೇ ಇಸವಿಯಲ್ಲೇ ಮಂಗಮಾಯವಾಯ್ತು ಅಂತ ನಂಬಿದ್ದ ನನಗೆ, ನಮ್ಮ ಶಾಸ್ತ್ರಿಗಳು ಡೈರಿ ಬರೀತಾರೆ ಅಂತ ತಿಳಿದು, ಆಶ್ಚರ್ಯವೇ ಆಯಿತು! ಡೈರಿಗಳ ಪುಟಗಳನ್ನ ತಿರುವಿದೆ. Last entry ಆಯುಧ ಪೂಜೆಯ ದಿನದ್ದು. ಓದಿದೆ:–

(ಶಾಸ್ತ್ರಿಗಳು ಬರೆದದ್ದು)

ಇಂದು ಬೆಳಿಗ್ಗೆ ಕರ್ಮವಿಧಿಗಳನ್ನೆಲ್ಲಾ ಮಾಮೂಲಿಯಾಗಿಯೇ ಮುಗಿಸಿದೆ. ಹಾಗೇ ಕಾಫಿ ಹೀರುತ್ತಾ ಇಂದಿನ ಪೂಜೆ ಕಾರ್ಯಕ್ರಮವನ್ನ ಮೆಲಕು ಹಾಕುತ್ತಿದ್ದೆ. ಆಗ ಬಾಗಿಲ ಬಳಿ ಯಾರೋ ನಿಂತು ಕೆಮ್ಮಿದ ಹಾಗಾಯಿತು. ನೋಡಿದರೆ ಒಬ್ಬ ಗಟ್ಟುಮಸ್ತಾದ ಕರೀ ಮೀಸೆಯ ಆಳು. ಒಂದು ಬಿಳೀ ಬನಿಯನ್ ಖಾಕೀ ಚಡ್ಡಿ ತೊಟ್ಟಿದ್ದ. "ನೀವು ನಮ್ಮ ಮನೆಗೆ ಈಗಲೇ ಬಂದು ಆಯುಧ ಪೂಜೆ ಮಾಡಬೇಕು. ನನ್ಹತ್ರ ಮೆಟಡಾರ್ ವ್ಯಾನಿದೆ. ವಾಪಸ್ಸು ಮನೇಗೆ ಕರ್ಕೊಂಡು ಬರ್ತೀನಿ. ಐದು ನೂರು ರೂಪಾಯಿ ಸಂಭಾವನೇನೂ ಕೊಡ್ತೀನಿ ಶಾಸ್ತ್ರಿಗಳೇ. ನೀವು ಬಂದೇ ಬರಬೇಕು" ಅಂತ ಕರೆದ. ಚಾಮುಂಡೇಶ್ವರಿ ದೆಸೆಯೇ ಇದು ಅಂತ ಅಂದುಕೊಂಡು ಅವನ ಜೊತೆ ಹೊರಟೆ.

ವ್ಯಾನಿನಲ್ಲಿ ಯಲಹಂಕ ದಾಟಿ ಎಲ್ಲೋ ಬಯಲೊಳಗೆ ನುಗ್ಗಿ ಒಂದು ಮನೆಯೊಳಗೆ ಹೋಗಿ ನಿಲ್ಲಿಸಿದ. "ಬನ್ನಿ, ಬನ್ನಿ" ಅಂದ. ಒಳಗೆ ಹೋಗೆ ನೋಡಿದರೆ ಅವನ ತರಹಾನೇ ಇನ್ನೂ ಹತ್ತು ಜನ (ಬನಿಯನ್ನು ಖಾಕಿ ಚಡ್ಡಿ) ನಿಂತಿರೋದೇ!

ಕನ್ನಡ, ತಮಿಳು, ತೆಲಗು, ಹಿಂದಿ ಎಲ್ಲರೂ ಎಲ್ಲಾ ಭಾಷೆಗಳನ್ನೂ ಮಾತಾಡ್ತಿದ್ದರು. ಪಡಸಾಲೆಯಲ್ಲಿ ಗೋಡೆಯ ಬದಿಗೆ ಕೆಲವು ದೊಣ್ಣೆಗಳು, ಹಾರೆ, ಚೂರಿಗಳನ್ನು ಇಟ್ಟಿದ್ದರು. ಎದುರಿಗೆ ಒಂದು ಬೆಳ್ಳಿ ತಟ್ಟೆಯಲ್ಲಿ ಒಂದು ಸೈಜ್ ಕಲ್ಲು, ಹೂವು, ಹಣ್ಣುಗಳೂ ಇದ್ದವು ಅಣ್ಣಿ. "ಇವೇ ನಮ್ಮ ಆಯುಧಗಳು ಶಾಸ್ತ್ರಿಗಳೇ. ಪೂಜೆ ಮಾಡಿ ನಮಗೆಲ್ಲಾ ಆಶೀರ್ವಾದ ಮಾಡಿ" ಅಂತ ಕೇಳಿಕೊಂಡ ಆ ಲೀಡರ್ರು. ನನಗೆ ಪರಿಸ್ಥಿತಿ ಸರಿಯಾಗಿ ಅರ್ಥವಾಗಲಿಲ್ಲ. "ಹಮಾರಾ ಕಾಮ್‌ಮೇ ಏಯೀಹೈ ಹಮಾರಾ ಆಯುಧ್ ಶಾಸ್ತ್ರೀಜಿ" ಅಂತ ಇನ್ನೊಂದು ಖಾಕಿ ಚಡಿ ಹೇಳಿದ. ಸರಿ ಪೂಜೆ ಶುರು ಮಾಡಿದೆ.

ಪೂಜೆ ಮಾಡ್ತಾ ಮಾಡ್ತಾ ನನ್ನ ಮಂದ ಬುದ್ಧಿಗೆ ಚಕಾರ್ ಅಂತ ಹೊಳೀತು. ಬೆಂಗಳೂರಿನ ಸುತ್ತಮುತ್ತ ಈಚೀಚೆಗೆ ಡಕಾಯಿತಿಗಳನ್ನು ನಡೆಸಿದ ಪಟಾಂಗಿಗಳು ಇವರೇ ಅಂತ! ಮಂಗಳಾರತಿ ಹಿಡಿದ ಕೈ ನಡುಗಿತು. "ಇಂಗೆ ಇರ್ಕಿಂಗ ಅಳುಕೆಲ್ಲಾ ನಲ್ಲ ಆಶೀರ್ವಾದ ಪಣ್ಣುಂಗು" ಅಂತ ಅಂದ ಇನ್ನೊಬ್ಬ ಖಾಕಿ ಚಡ್ಡಿ. ಆಶೀರ್ವಾದ ಮಾಡೋವಾಗ ನಟಿಸುತ್ತಾ "ದೇವರೇ, ಈ ರಾಕ್ಷಸರ ಕೈಲಿಂದ ನನ್ನ ಪಾರುಮಾಡಪ್ಪಾ. ಸಧ್ಯ ನಿನ್ನ ಆಶೀರ್ವಾದ ನನಗೆ ಇದ್ದರೆ ಸಾಕಪ್ಪಾ" ಅಂತ ಅಂದುಕೊಂಡೆ. ಆಗ ಆ ಲೀಡರ್ರು "ನೀವು ಇಲ್ಲಿಗೆ ಬಂದು ಪೂಜೆ ಮಾಡಿಸಿದ್ದು ಯಾರಿಗೂ ತಿಳೀಬಾರ್ದು ಶಾಸ್ತ್ರಿಗಳೇ. ಅದರಲ್ಲೂ ಪೋಲಿಸರಿಗೇನಾದರೂ ನೀವು ಸುದ್ದಿ ಕೊಟ್ಟರೆ, ಇದೇ ನಿಮ್ಮ ಕಡೆಯ ಆಯುಧ ಪೂಜೆ, ಹುಷಾರ್!" ಅಂತ ಗುಡುಗಿದ. ಇನ್ನೊಬ್ಬ ಖಾಕಿ ಚಡ್ಡಿ ವಾಪಸ್ ನನ್ನ ಕರ್ಕೊಂಡು ಬಂದು ಮನೆಯಲ್ಲಿ ಬಿಟ್ಟು "ವಸ್ತಾನು, ಶಾಸ್ತ್ರಿಗಾರ್ರು" ಅಂತ ಹೇಳಿ ಹೊರಟು ಹೋದ. ಹಾಗೇ ನಡಗುತ್ತಾ ಕೂತೆ.

ಹೊರಗಡೆ ಒಂದು ಕಾರು ಬಂದು ನಿಂತ ಶಬ್ದವಾಯಿತು. ಇದು ಪೋಲೀಸರ ಭೇಟಿಯೇ ಸರಿ, ನನ್ನ ಕತೆ ಮುಗಿಯಿತು ಎಂತಲೇ ಭಯದಿಂದ ಬಾಗಿಲು ತೆರೆದೆ. ನೋಡಿದರೆ ಸಫಾರಿ ಸೂಟಿನಲ್ಲಿರೋ ಮಧ್ಯವಯಸ್ಕನೊಬ್ಬ ಬಂದ. "ಶಾಸ್ತ್ರಿಗಳೇ, ನಮ್ಮ ಮನೆಯಲ್ಲಿ ಒಂದು ಪ್ರಿಂಟಿಂಗ್ ಪ್ರೆಸ್ ಇಟ್ಟಿದ್ದೀನಿ. ನಿಮ್ಮ ಕೈಯಿಂದ ಇವತ್ತು ಪೂಜೆ ಮಾಡಿಸಿದರೆ ನನಗೆ ತುಂಬಾ ಸಮಾಧಾನ ಆಗುತ್ತೆ. ನೀವು ಈಗಲೇ ಬರಬೇಕು" ಅಂತ ಗೋಳು ಹೊಯ್ಕಂಡ. ಸರಿ ಅಂತ ಹೊರಟೆ.

ಈ ಸಲ ನನ್ನ ಯಾತ್ರೆ ಮಾರುತಿ ವ್ಯಾನಿನಲ್ಲಿ ಹೊಸೂರು ರೋಡಿನಾಚೆ ಅಲ್ಲೆಲ್ಲೋ. ದೊಡ್ಡ ಮನೆ. ಗ್ರೌಂಡ್ ಫ್ಲೋರಿನಲ್ಲಿ ಅವನ ಪ್ರಿಂಟಿಂಗ್ ಮೆಶಿನ್ನು. ಪೂಜೆ ಮಾಡಿದೆ. ಹಣ್ಣು ಕಾಯಿ ಇಟ್ಟು ನನಗೆ ನಮಸ್ಕಾರ ಮಾಡಿದ. ಅವನ ಹೆಂಡತಿ "ರೀ ದಕ್ಷಿಣೇನೇ ಮರೆತುಬಿಟ್ಟಿರಲ್ರೀ" ಅಂತ ಜ್ಞಾಪಿಸಿದ್ದಕ್ಕೆ ಸಾರಿ, ಸಾರಿ ಅಂತ ಮೆಶಿನ್ ಸ್ವಿಚ್ ಹಾಕಿದ. ಟಿಕಾಟಿಕ್ ಅಂತ ನನ್ನ ಕಣ್ಣೆದುರಿಗೇ–ಐದು ನೂರು ರೂಪಾಯಿಗಳ ನೋಟುಗಳು–ಪ್ರಿಂಟ್ ಆಗಿ ಬರೋದೇ? ಬಿಸಿ ಬಿಸಿಯಾದ ನೋಟುಗಳನ್ನ ನನ್ನ ಕೈಗಿಟ್ಟು, "ಎಲ್ಲಾ ನಿಮ್ಮ ಆಶೀರ್ವಾದ ಶಾಸ್ತ್ರಿಗಳೇ. ಆದರೆ ಈ ವಿಷಯ ಎಲ್ಲಾದರೂ ಬಾಯಿ ಬಿಟ್ಟರೆ, ನಿಮ್ಮ ಸಂಸಾರಕ್ಕೆ ಸ್ವಲ್ಪ ಕಷ್ಟ ಆಗುತ್ತೆ ಅಷ್ಟೆ. ಬನ್ನಿ, ಡ್ರಾಪ್ ಮಾಡ್ತೀನಿ" ಅಂದ. ತಪ್ಪಗೆ ಮನೆಗೆ ಬಂದು ಬಾಯಿ ಮುಚ್ಕೊಂಡು ಕೂತೆ. ಮಧ್ಯಾಹ್ನದ ಊಟಕ್ಕೆ ಅಂತ ಬಾಯಿ ಬಿಟ್ಟಿದ್ದು ಎಷ್ಟೋ ಅಷ್ಟೆ.

ಚಾಮುಂಡೇಶ್ವರಿ, ನಿನ್ನ ದೆಸೆಯಿಂದ ಇವತ್ತು ಧನಲಾಭದೊಂದಿಗೆ ವಾಹನ ಯೋಗವೂ ಬಂದು, ಮೆಟಡರ್, ಮಾರುತಿ ವ್ಯಾನಿನಲ್ಲಿ ತಿರುಗಿದೆ. ಈಗ ಇನ್ಯಾವ

ವಾಪಸನವಮ್ಮಾ? ಅಂತ ಕೇಳಿಕೊಂಡೆ. ತಕ್ಷಣ ಹೊರಗಡೆ ಒಂದು ಜೀಪು ಬಂದು ನಿಂತಿತು. ಅದರಿಂದ ಒಬ್ಬ ಧಢೂತಿ ಆಸಾಮಿ ಕೆಳಗಿಳಿದ. "ವಾದ್ಯಾರೇ, ಇಪ್ಪೋಮೇ ನೀಂಗು ವಂದು ಪೂಜೆ ಪಣ್ಣುಣು" ಅಂತ ಹುಕುಂ ಕೊಟ್ಟ. "ಆಗೆಲ್ಲಪ್ಪಾ" ಅಂದೆ. "ಆಗಾದು ಅನ್ನ ಚುಮ್ಮ ವಿಡುಮಾಟೆ" ಅಂತ ಗುಡುಗಿದ ಆ ಮೀಸೆ. "ಸರಿಯಪ್ಪಾ" ಅಂತ ಹೊರಟೆ.

ಈ ಸಲ ಜೀಪು ಹಿಡಿದ ದಾರಿ ಕನಕಪುರಾ ಕಡೆಗೆ. ಸುತ್ತಿ ತಿರುಪಿ ಕೊನೆಗೆ ಒಂದು ಮನೇಗೆ ಬಂದ್ವಿ. ಒಳಗೆ ಕಾಲಿಟ್ಟರೆ ಗೋಡೆ ಮೇಲೆಲ್ಲಾ ಆನೆ ಕೊಂಬುಗಳೇ! "ಇವರಿಕೆ ಆನೆಕಳು ಅಂದರೆ ತುಂಬಾ ಇಷ್ಟ!" ಅಂತ ಅವನ ಹೆಂಡತಿ ವಿವರಿಸಿದಳು. "ನೀವು ಯಾವ ಊರಮ್ಮಾ?" ಅಂತ ಕೇಳಿದೆ. "ಇಂಗೆದಾ, ನಾಗರಹೊಳೆ ಪಕತಲೆ" ಅಂದಳು. ಅರ್ಥವಾಯ್ತು! ಆದರೆ ಆ ಘಟಿಂಗ ಬಿಟ್ಟಾನೆಯೆ? ಪೂಜೆ ಮಾಡಿಸ್ಕೊಂಡೇ ಬಿಟ್ಟ. ಅಲ್ಲೀ ಸ್ಟೂಲ್ ಮೇಲೆ ನಾಜೂಕಾಗಿ ಇಟ್ಟಿದ್ದ ಒಂದು ಬಂದೂಕಕ್ಕೆ ಮಂಗಳಾರತೀನೂ ಮಾಡಿಸ್ಕೊಂಡ. ಐನೂರು ರೂಪಾಯಿ ಸಂಭಾವನೇನೂ ಕೈಗಿಟ್ಟ. (ಮುಂಚೇನೇ ಪ್ರಿಂಟ್ ಆದದ್ದು). "ಇಂಗೆ ವಂದ ವಿಷಯ ಯಾರಿಕ್ಕಾನಾ ಸೊನ್ನಾ, ಈ ಗನ್ನಲ್ಲೇ ಉಂಗಳ ವಾಯಿಯಲ್ಲಿ ಅಡಿಪೆ!" ಅಂದ.

"ಅಪ್ಪಾ, ನನ್ನ ಬಿಟುಡಪ್ಪಾ, ನಾನು ಇವತ್ತಿಂದ ಯಾರಿಗಾದರೂ ಹೇಳೋದು ಇರಲಿ, ಜೀವ ಪರ್ಯಂತ ಮಾತೇ ಆಡೋಲ್ಲ" ಅಂತ ಭಾಷೆ ಕೊಟ್ಟೆ. "ಪಾಪ, ರೊಂಬ ನಲ್ಲ ವಾದ್ಯಾರು!" ಅಂತ ಅವನ ಹೆಂಡತಿ ಬೇರೆ ಶಿಫಾರಸಿ ಮಾಡಿದಳು. "ಸರಿ, ವಾಂಗು ಪೋಲಾಂ" ಅಂತ ಅದೇ ಜೀಪಿನಲ್ಲೇ ಕರೆದುಕೊಂಡು ಬಂದು ಮನೆಗೆ ತಳ್ಳಿ ಹೋದ!

ಮನೆಗೆ ಬಂದ ಮೇಲೆ ನನ್ನ ಕೈಕಾಲುಗಳಲ್ಲಿ ಏನೋ ಗಡಗಡ ನಡುಕ ಶುರುವಾಯಿತು. ಅಪ್ಪಿ ತಪ್ಪಿ ನನ್ನ ಬಾಯಿಂದ ಏನಾದರೂ ಮಾತು ಹೊರಟು ಇವತ್ತಿನ ಆಯುಧ ಪೂಜೆಗಳ ಸುದ್ದಿ ಹೊರ ಬಿದ್ದು ಪೋಲೀಸರ ಕಿವಿಗೂ ಮುಟ್ಟಿದರೆ ನನ್ನ ಗತಿ, ನನ್ನ ಸಂಸಾರದ ಗತಿ ಏನಾಗಬಹುದೆಂದು ಯೋಚಿಸಿದೆ. ಈ ಯೋಚನೆಯಿಂದಲೋ ಇಲ್ಲಾ ಗಾಭರಿಯಿಂದಲೋ, ಆ ಕ್ಷಣ ನನ್ನ ಗಂಟಲಲ್ಲಿ ಮಾತೇ ನಿಂತು ಹೋಯ್ತು. ನನ್ನ ಕಾಲ ತೀರಿದ ಮೇಲಾದರೂ ಜನಕ್ಕೆ ನಿಜ ಸಂಗತಿ ತಿಳಿಯಲಿ ಎಂದು ಈಚೀಚೆಗೆ ಡೈರಿಯಲ್ಲಿ ಇದೆಲ್ಲಾ ಬರೆದಿಟ್ಟಿದೀನಿ. ಬಹುಶಃ ನನಗೆ ತೀರಾ ಆತ್ಮೀಯರಾರಾದರೂ ಕೇಳಿದರೆ ಮಾತ್ರ ಈ ಡೈರಿ ತೋರಿಸಬಹುದು ಅಂತ ನಿಶ್ಚಯಿಸಿಕೊಂಡಿದ್ದೀನಿ    ನಂಜುಂಡ ಶಾಸ್ತ್ರಿ.

(ಇಲ್ಲಿಗೆ ಡೈರಿ entry ಮುಗಿದಿತ್ತು)

"ಈಗ ಏನ್ಮಾಡೋದು ಅಂತ ತಿಳೀತಿಲ್ವಲ್ಲಪ್ಪಾ?" ಅಂತ ಶಾಸ್ತ್ರಿಗಳ ಹೆಂಡತಿ ಮೊರೆಯಿಟ್ಟರು. ನಾನೊಂದು ಧೀರ್ಘ ನಿಟ್ಟುಸಿರು ಬಿಟ್ಟು, "ಅವರ ಪಾಡಿಗೆ ಅವರನ್ನ ಸ್ವಲ್ಪ ದಿವಸ ಬಿಟ್ಟುಬಿಡೀಮ್ಮ. ಇದು ಕಾಂಪ್ಲಿಕೇಟೆಡ್ ಕೇಸು. ಇದನ್ನ ಲಾಯರ್ ಆಗಲಿ, ಡಾಕ್ಟರ್ ಆಗಲಿ, ಪೋಲೀಸ್ ಆಗಲಿ ಬಗೆಹರಿಸೋಕ್ಕೆ ಸಾಧ್ಯವೇ ಇಲ್ಲ. ನಾನಿನ್ನು ಬರ್ತೀನೆ. ಬಾಗಿಲು ಹಾಕ್ಕೊಳ್ಳಿ" ಅಂತ ಹೇಳಿ ಅಲ್ಲಿಂದ ಕಾಲುಕಿತ್ತೆ!

# ಕಳಿಸಲಾ(ರ)(ಗ)ದ ಕೆಲವು ಪತ್ರಗಳು

-ಗುರುವ

ಸನ್ಮಾನ್ಯ ಸಂಪಾದಕರೆ,

ಸನ್ ಸಾವಿರದ ಹತ್ತೊಂಬತ್ತು ನೂರ ನಲವತ್ತೆಂಟರಿಂದಲೂ ನಾನು ಅಕ್ಷರಸ್ಥ. ಕಲಿತ ನಾಲ್ಕು ಅಕ್ಷರಗಳನ್ನು ನೆನಪಿನಲ್ಲಿಡಲು ಇರುವ ಅನೇಕ ಮಾರ್ಗಗಳಲ್ಲಿ ಪತ್ರ ಬರೆಯುವುದೂ ಒಂದು. ಹೀಗೆಂದು ಈ ಸಾಕ್ಷರತಾ ಆಂಧೋಳನಾಕಾರರಿಗೆ ಸೂಚಿಸಬಯಸುತ್ತೇನೆ. ನಾನಿನ್ನೂ ಶಾಲೆಯಲ್ಲಿ ಕಲಿಯುತ್ತಿರುವಾಗ ಒಂದು ಪರಿಪಾಠವಿತ್ತು. ಏನಂದರೆ ಆ ಪೀರಿಯಡ್‌ನ ಮಾಸ್ತರು ಬರದಿದ್ದರೆ ಅವರ ಮೇಲಿನ ಸಿಟ್ಟನ್ನು ನಮ್ಮ ಮೇಲೆ ತೀರಿಸಿಕೊಳ್ಳಲು ಹೆಡ್ ಮಾಷ್ಟ್ರು ನಮ್ಮನ್ನು ಡ್ರಿಲ್ ಮಾಷ್ಟ್ರು ಆದ ಘನಿಖಾನ್ ಸಾಹೇಬರ ವಶಕ್ಕೆ ಕೊಡುತ್ತಿದ್ದರು. ಡ್ರಿಲ್ ಅಂದರೆ ಡ್ರಿಲ್. ಇದನ್ನು ಮೈದಾನದಲ್ಲಿ, ಯೂನಿಫಾರಂ ಹಾಕಿಕೊಂಡು, ತಂಪು ಹೊತ್ತಿನಲ್ಲಿ ಮಾಡಬೇಕೆಂಬ ನಿಯಮವೇನೂ ಇದ್ದಂತಿಲ್ಲ. ಘನಿಸಾಹೇನರ ಹತ್ತಿರ ಮಳೆ ಇರಲಿ, ಬಿಸಿಲಿರಲಿ, ಅಪರೂಪಕ್ಕೆ ಸಿಕ್ಕ ನಮ್ಮನ್ನು ಸ್ಕೂಲ್ ಬಿಲ್ಡಿಂಗ್ ಸುತ್ತಾ ಕೊನೆಯ ಪಕ್ಷ ಎರಡು ಬಾರಿಯಾದರೂ ಲೆಫ್ಟ್-ರೈಟ್ ಮಾಡಿಸಿ ತರುತ್ತಿದ್ದರು. ಅನೇಕ ಬಾರಿ ಮೈದಾನದಲ್ಲಿದ್ದ ಕಲ್ಲು, ಕಸ ಮುಂತಾದವನ್ನು ಆರಿಸಿ ತೆಗೆದದ್ದೂ ಡ್ರಿಲ್‌ನಲ್ಲಿ ಬರುತ್ತಿತ್ತು. ಅವರ ಪ್ರಕಾರ, ರಣ ಬಿಸಿಲಿನಲ್ಲಿ ಲೆಫ್ಟ್-ರೈಟ್ ಮಾಡುತ್ತಿರುವಾಗ ಒಬ್ಬ ನರಪೇತ ತಲೆತಿರುಗಿ ಬಿದ್ದ ಎಂದು ನೆವ ಮಾಡಿ ಹೀಗೆ ಹೊತ್ತಲ್ಲಾ ಹೊತ್ತಿನಲ್ಲಿ ಹುಡುಗರಿಗೆ ಡ್ರಿಲ್ ಮಾಡಿಸುವುದರಿಂದ ಮುಕ್ತಿ ಸಿಕ್ಕಿತಾದರೂ ಘನಿಖಾನ್‌ರವರಿಂದ ಮುಕ್ತಿ ಸಿಕ್ಕಿರಲಿಲ್ಲ. ಏಕೆಂದರೆ ಅವರು ಇತ್ತೀಚೆಗೆ ಒಂದು ಹೊಸ ನಮೂನೆಯ ಡ್ರಿಲ್ ಪ್ರಾರಂಭಿಸಿದ್ದರು. ಅದೇನೆಂದರೆ ನಮಗೆ ಪತ್ರ ಬರಯುವುದನ್ನು ಕಲಿಸುತ್ತಿದ್ದರು. ಕ್ಲಾಸ್‌ನಲ್ಲಿ ಕೂಡಿಹಾಕಿಕೊಂಡು ಯಾರಿಗಾದರೂ ಒಂದು ಮಾದರಿ ಪತ್ರ ಬರೆಯಿರಿ ಎಂದು ಕೆಲಸ ಹಚ್ಚುತ್ತಿದ್ದರು. ಇದರಿಂದಾಗಿ ಅವರಿಗೆ ಡ್ರಿಲ್ ಮೇಷ್ಟ್ರು ಪದವಿ ಹೋಗಿ ಪತ್ರ ಬರೆಯುವುದನ್ನು ಕಲಿಸುವ ಮೇಷ್ಟ್ರು ಎಂದು ಹೆಸರು ಬಂದಿತ್ತು.

ಘನಿಖಾನರಿಗೆ ಏನೇ ಹೆಸರು ಬರಲಿ ನನಗಂತೂ ಪತ್ರ ಬರೆಯುವ ಚಟ ಬೆಳೆದುಬಿಟ್ಟಿತ್ತು. ಆದರೆ ಈ ಯಾವ ಪತ್ರವನ್ನೂ ಪೋಸ್ಟ್ ಮಾಡಲಾಗಿರಲಿಲ್ಲ. ಏಕೆಂದರೆ ಇವಕ್ಕೆ ಉತ್ತರ ಬಂದರೆ? ಇನ್ನೂ ಒಂದು ಕಾರಣ ಕೈಯಲ್ಲಿ ಕಾಸಿಲ್ಲದ್ದು. ಆಗ ಯಾವುದಾದರೂ ಒಂದು ಕಂಟ್ರಿ ಕ್ರಿಕೆಟ್ ಮ್ಯಾಚ್ ನಡೆದರೆ ಕಡ್ಲೆಕಾಯಿ ತಿನ್ನಲು ಕಾಸಿರುತ್ತಿರಲಿಲ್ಲ, ಇನ್ನು ಅಂಚೆ ಚೀಟಿಗೆ ಎಲ್ಲಿಯ ಹಣ? ಮುಂದೆ ಎಂದಾದರೂ ದೇಶದ ಆರ್ಥಿಕ ಪರಿಸ್ಥಿತಿ ಸುಧಾರಿಸಿ, ಮಕ್ಕಳ ಕೈಯಲ್ಲೂ ಖರ್ಚು ಮಾಡಲು ಹಣ ಬಂದಾಗ ಇವನ್ನು ಅಂಚೆಗೆ ಹಾಕಿದರೆ ಆಯಿತು ಎಂದು ಹಾಗೇ ಒಂದು ಬಟ್ಟೆಯಲ್ಲಿ ಭದ್ರವಾಗಿ ಕಟ್ಟಿಟ್ಟಿದ್ದೆ.

ವಯಸ್ಸು ಏರಿದಂತೆ ನನ್ನ ಪತ್ರ ಬರೆಯುವ ಹಾಗೂ ಅವುಗಳನ್ನು ಹಾಗೇ ಭದ್ರವಾಗಿ ಕಟ್ಟಿ ನನ್ನಲ್ಲಿಯೇ ಇಟ್ಟುಕೊಳ್ಳುವ ಚಟ ಬೆಳೆದವು. ಇವುಗಳಲ್ಲಿ ತಿಂಗಳ ಖರ್ಚಿಗೆ ಹಣ ಕೊಡದ ಅಪ್ಪನಿಗೆ, ಕೊಡಿಸದ ಅವ್ವನಿಗೆ, ಹೋಂವರ್ಕ್ ಕೊಟ್ಟು ನಮ್ಮ ಮ್ಯಾಚ್ ಕೆಡಿಸಿದ ಮೇಷ್ಟ್ರಿಗೆ, ಆಟದಲ್ಲಿ ಸೋಲಿಸಿದ ರಂಗನಿಗೆ, ಕಾಫಿ ಕುಡಿಸದ ಮಂಗನಿಗೆ- ಹೀಗೆ ಅನೇಕ ಪತ್ರಗಳು ಹೊರಬಂದವು. ನಂತರ ಪ್ರೇಮ ಪತ್ರಗಳು, ಪ್ರೇಯಸಿಯ ಇತರೆ ಪ್ರೇಮಿಗಳನ್ನು ಬೆದರಿಸಿ ಬರೆದ ಪತ್ರಗಳೂ ಕೂಡಿಕೊಂಡು ಪತ್ರಗಳ ಸಂಖ್ಯೆ ಬೆಳೆಯಿತಾದರೂ ನನ್ನ ಉತ್ಸಾಹ ಕುಗ್ಗಲಿಲ್ಲ. ಮುಂದೆ ಬೆಳೆದು ಡಿಗ್ರಿ ಪಡೆದು, ಕೆಲಸಕ್ಕೆ ಸೇರಿದ ಮೇಲೂ ಈ ನನ್ನ ಪ್ರವೃತ್ತಿ ಮುಂದುವರೆಯಿತಾದರೂ, ಪತ್ರಗಳನ್ನು ಅಂಚೆಗೆ ಹಾಕುವ ಶಕ್ತಿ ಸಾಮರ್ಥ್ಯ ಬರಲಿಲ್ಲ. ಏಕೆಂದರೆ ಅಂಚೆಯ ವೆಚ್ಚ. ನಮ್ಮ ಊರ ಗುಜರಾತಿ, ಸಿಂಧಿ, ಮಾರ್ವಾಡಿ ವರ್ತಕರೆಂದರೆ ಆಂಧ್ರದ ಸೆಟ್ಟರಿಗಿಂತಲೂ ಜಿಪುಣರು. ಈ ಸಾಲಿಗೆ ಸೇರಿದ ಕೇಂದ್ರದ ವಿತ್ತ ಮಂತ್ರಿಗಳು ಕೊಟ್ಟ ಸಾಲದ ಮೇಲಿನ ಬಡ್ಡಿಯನ್ನು ವಸೂಲಿ ಮಾಡುವಂತೆ ಪ್ರತಿವರ್ಷವೂ ತೆರಿಗೆಯನ್ನು ಹೆಚ್ಚಿಸಿ ವಸೂಲಿಮಾಡುತ್ತಿದ್ದಾರೆ. ಮುಂದೆ ಯಾರಾದರೂ ಕರ್ನಾಟಕದವರಂತೆ (ನೆಲ, ಜಲ, ನೌಕರಿ ಕೊಟ್ಟು) ಧಾರಾಳತನ ತೋರಿಸುವವರು ವಿತ್ತ ಮಂತ್ರಿಗಳಾಗಿ ಬಂದಾಗ ನೋಡುವಾ ಎಂದು ಈ ಎಲ್ಲಾ ಪತ್ರಗಳನ್ನು ಹಾಗೇ ಭದ್ರವಾಗಿ ಇಟ್ಟಿದ್ದೆ.

ವಯಸ್ಸಾದಂತೆ ನನ್ನ ಪತ್ರಗಳ ವಸ್ತುಗಳೇ ಬದಲಾಗಿವೆ. ಇದಕ್ಕೆ ಕಾರಣ ಕೇಂದ್ರದಲ್ಲಿ ವಿತ್ತಮಂತ್ರಿಗಳು ಬದಲಾಗಿರುವುದು. ಇನ್ನಾದರೂ ನನ್ನ ಪತ್ರಗಳಿಗೆ ಅಂಚೆ ಪೆಟ್ಟಿಗೆ ಕಾಣುವ ಸದವಕಾಶ ಬಂದೀತು ಎಂದು ಪ್ರಾರ್ಥಿಸಿ ಉದ್ದುದ್ದವಾದ ಪತ್ರಗಳನ್ನುಬರೆಯಲು ಪ್ರಾರಂಭಿಸಿದೆ. ಆದರೆ ಆರ್ಥಿಕ ತಜ್ಞರಾದ ಈ ಮುಂತ್ರಿ ಮಹೋದಯರೂ ನನ್ನ ಯೋಜನೆಯನ್ನು ಬುಡಮೇಲು ಮಾಡಿದರು. ಏಕೆಂದರೆ ಮಂತ್ರಿಗಳು, ಸರಕಾರ, ಅಧಿಕಾರಿಗಳು ಖರ್ಚು ಕಡಿಮೆ ಮಾಡಿರಿ ಎಂದು ಹೇಳುವುದು ಬಿಟ್ಟು ಪ್ರಜೆಗಳ ಬೆನ್ನಿಗೆ ಇನ್ನಷ್ಟು, ಮತ್ತಷ್ಟು ಕರ (ಹಣ) ಭಾರ ಹೇರಿದ್ದಾರೆ. ಆದ್ದರಿಂದ ಈ ಪತ್ರಗಳನ್ನು ಅಂಚೆಗೆ ಹಾಕದೆ ನಿಮ್ಮ ಪತ್ರಿಕೆಗೆ ಕಳುಹಿಸುತ್ತಿದ್ದೇನೆ. ಹೀಗೆ ಮಾಡಲು ನನ್ನ ದುರುದ್ದೇಶವೆಂದರೆ ನಿಮ್ಮ ಶೋತೃಗಳಲ್ಲಿಯೂ ನನ್ನಂತೆ ಬವಣೆಗೀಡಾದವರೂ ಇದ್ದರೆ (ಇದ್ದೇ ಇರುತ್ತಾರೆ) ಅವರಿಗೂ ಇದರಂದ ಪರಿಹಾರ ಸಿಗಲಿ ಎಂಬುದೇ ಆಗಿದೆ.

ಪತ್ರ-೧:

ಸಂಗೀತಪ್ರಿಯರಾದ ನಮ್ಮ ಹಿಂದಿನ ಮನೆಯವರೇ, ನೀವು ಈ ಮನೆಗೆ ಹೊಕ್ಕು ಇಂದಿಗೆ ಒಂದು ವರ್ಷವೇ ಕಳೆಯಿತು. ಈ ವಿಷಯ ನಿಮಗೆ ನೆನಪು ಇರಲಿಕ್ಕಿಲ್ಲ. ಆದರೆ ಅಂದಿನಿಂದಲೇ ಮನಃಶಾಂತಿ ಕಳೆದುಕೊಂಡ ನಮಗೆ ಆ ದುರ್ದಿನ ಪೂರ್ಣ ನೆನಪಿದೆ. ಕಾರಣ ನೀವು ಬರುವಾಗಲೇ ಜೊತೆಗೆ ನಿಮ್ಮ ದುಂಡನೆಯ ಕುವರಿಗೆ ಸಂಗೀತ, ಅದರಲ್ಲೂ ಕರ್ನಾಟಕ ಸಂಗೀತ ಕಲಿಸಲು ತಮಿಳುನಾಡಿನ (ಅಂದರೆ ಸಾಕು ಎಂದು ಕಾಣುತ್ತದೆ. ಅವರ ಗಾತ್ರ, ಕಂಠ, ಸೌಂದರ್ಯ ಮುಂತಾದವನ್ನು ವರ್ಣಿಸುವುದು ಅನಗತ್ಯ) ಸಂಗೀತದ ಉಪಾಧ್ಯಾಯರನ್ನು

ಕರೆತಂದಿರಿ. ಅಂದಿನಿಂದ ನಮ್ಮ ಓಣಿಯಲ್ಲಿದ್ದ ಕತ್ತೆಗಳು, ಹಂದಿಗಳು ಕೂಡ ಈ ಪ್ರದೇಶವನ್ನು ತ್ಯಜಿಸಿ ಪರಾರಿಯಾಗಿವೆ. ಅಷ್ಟೇ ಏಕೆ, ಊರ ಹತ್ತರದ ಗುಡ್ಡದಷ್ಟು ದೊಡ್ಡ, ಊರ ಕೆರೆಯಂತಹ ಬಾಯಿ ಉಳ್ಳ ಬಂಗಾರಮ್ಮ ಕೂಡ ಇತ್ತೀಚೆಗೆ ತನ್ನ ಸೋಲನ್ನೊಪ್ಪಿ ಸುಮ್ಮನಾಗಿದ್ದಾಳೆ. ನೀವು ಬಂದಂದಿನಿಂದ ನಮ್ಮ ಓಣಿಯ ಮಕ್ಕಳಿಗೆ ನಿದ್ದೆ ಇಲ್ಲವಾಗಿದ್ದರೂ ಅವರ ಸಂಖ್ಯೆ ಹೆಚ್ಚಾಗುತ್ತಿದೆ. ಆದ್ದರಿಂದ ಅವರ ಹಿರಿಯರು ನಿದ್ದೆಗೆಟ್ಟು, ಕೊರಗಿ, ಸೊರಗಿ ಹೋಗಿದ್ದಾರೆ. ನಮ್ಮ ಓಣಿಯಲ್ಲಿ ಖಾಲಿ ಮನೆಗಳ ಸಂಖ್ಯೆ ಜಾಸ್ತಿಯಾಗಿದೆ, ಬಾಡಿಗೆ ಕಡಿಮೆಯಾಗಿದೆ ಎಂದು ಇಲ್ಲಿಯ ಬಾಡಿಗೆ ಮನೆ ಮಾಲೀಕರು ಗೋಳಾಡುತ್ತಿದ್ದಾರೆ. ಆದ್ದರಿಂದ ನೀವು ತಮ್ಮ ಮಗಳು ಹಾಗೂ ಆಕೆಯ ಸಂಗೀತದ ಉಪಾಧ್ಯಾಯರೊಂದಿಗೆ ಬೇರೆ ಬಡಾವಣೆಗೆ ಹೋಗಬೇಕೆಂದೂ, ಇಲ್ಲಿಂದ ಓಡಿಹೋಗಿ ಅಲ್ಲಿ ಸುಖವಾಗಿರುವ ಪ್ರಾಣಿಗಳನ್ನು ಇಲ್ಲಿಗೆ ಕಳುಹಿಸಿ ನಮ್ಮನ್ನು ರಕ್ಷಿಸಬೇಕೆಂದೂ ಕೋರುವ,

**ಪತ್ರ-೨:**

ಶ್ವಾನ ಪ್ರಿಯರಾದ ಪಕ್ಕದ ಮನೆಯವರಿಗೆ ನಮ್ಮ ಬೌಬೌಗಳು. ಸನ್ಮಾನ್ಯರೆ, ನಾಯಿಗಳಲ್ಲಿ ದೊಡ್ಡ, ಗಿಡ್ಡ, ಉದ್ದ-ಮೋಟುಬಾಲದ, ಕಡಿಯುವ, ಕೆರೆಯುವ, ಕೆಂಗಣ್ಣಿನಿಂದ ಮಾತ್ರ ನೋಡುವ, ಕೇವಲ ಬೊಗಳುವ, ಗುರುಗುಟ್ಟುವ, ಬಾಲ ಆಡಿಸುವ, ಮುದುರಿಕೊಂಡು ಓಡುವ- ಹೀಗೆ ಅನೇಕ ಬಗೆಗಳಿದ್ದು ಇದರಲ್ಲಿ ನಿಮ್ಮ (ನಾಯಿಯ)ದೂ ಒಂದು ಬಗೆ ಎಂದು ಓದಿದ್ದೆ. ಆದರೆ ಈಗಿರುವ ನಾಯಿಗಳ ಸ್ವಭಾವದ, ನಡವಳಿಕೆಯ ಬಗೆಗೆ ಇರುವ ಪುಸ್ತಕಗಳನ್ನು ಸುಟ್ಟುಹಾಕಿ, ಈ ನಿಮ್ಮ ಪ್ರೀತಿ ಪಾತ್ರ ನಾಯಿಯ ಸ್ವಭಾವವನ್ನು ನಡವಳಿಕೆಯನ್ನು ಸೇರಿಸಿ ಒಂದು ಹೊಸ ಪುಸ್ತಕವನ್ನು ಬರೆಯುವ ಕಾಲ ಬಂದಿದೆ ಎಂದು ಕಾಣುತ್ತದೆ. ಏಕೆಂದರೆ, ನಾಯಿಗಳು ತಮ್ಮ ಸಾಮ್ರಾಜ್ಯದ ಗಡಿ ಗುರುತುಗಳಾಗಿ ನೆಲದಲ್ಲಿ ಭದ್ರವಾಗಿ ನೆಟ್ಟ ಅಥವಾ ನಿಂತ ಕಲ್ಲು, ಮರ, ಟೆಲಿಫೋನ್ ಅಥವಾ ವಿದ್ಯುಚ್ಛಕ್ತಿ ಕಂಬಗಳನ್ನು ಮಾತ್ರ ಬಳಸುತ್ತವೆ ಎಂದು ಓದಿದ್ದೆ. ಅಷ್ಟೇ ಏಕೆ ಹೀಗೆ ಎಂದು ಪುಸ್ತಕ ಬರೆದ ಪ್ರಾಣಿಗಳ ಮನೋವಿಜ್ಞಾನಿ ಒಬ್ಬರು ಬರೆದ ಮಹಾ ಪ್ರಬಂಧಕ್ಕೆ ಪಿಹೆಚ್.ಡಿ., ಡಿಗ್ರಿ ನೀಡಿದ್ದರೆಂದೂ ಕೇಳಿದ್ದೆ. ನಂತರ ಶ್ವಾನ ಜಗತ್ತಿಗೆ ಅವರು ನೀಡಿದ ಅದ್ಭುತ ಕೊಡುಗೆಯನ್ನು ಮೆಚ್ಚಿ ನಮ್ಮ ಊರಿನ ಶ್ವಾನಪ್ರಿಯರ ಕ್ಲಬ್‌ನವರು ಅವರಿಂದ ಒಂದು ಭಾಷಣ ಬಿಗಿಸಿ, ಹೂಮಾಲೆ ಹಾಕಿ ಸನ್ಮಾನಿಸಿ, ತಮ್ಮ ಕ್ಲಬ್‌ಗೆ ಅವರನ್ನು ಗೌರವಾನ್ವಿತ ಸದಸ್ಯರನ್ನಾಗಿ ಮಾಡಿಕೊಂಡಿದ್ದಾರೆ ಎಂದೂ ಪತ್ರಿಕೆಯಲ್ಲಿ ಬಂದಿದೆ. ಆದರೆ ನಿಮ್ಮ ಶ್ವಾನದ ಇತ್ತೀಚಿನ ನಡವಳಿಕೆ ಆ ವಿಜ್ಞಾನಿಗಳ ಸಂಶೋಧನೆಯನ್ನು ಸುಳ್ಳು ಮಾಡಿದೆ. ಈ ವಿಷಯ ಅವರಿಗಿಂತಲೂ ಮೇಧಾವಿಗಳಾದ, ಹೆಚ್ಚಿನ, ತಜ್ಞರಿಗೆ ತಿಳಿದರೆ ಶ್ವಾನ ಸಂಶೋಧನಾ ವಿಜ್ಞಾನಿಗಳ ವರ್ಗದಲ್ಲಿ ದೊಡ್ಡ ಆಂದೋಲನವೇ ಆಗುತ್ತದೆ. ಅವರಿಗೆ ಡಾಕ್ಟರೇಟ್ ಡಿಗ್ರಿ ಕೊಟ್ಟ ವಿಶ್ವವಿದ್ಯಾಲಯದವರು ತಾವಿತ್ತ ಪದವಿಯನ್ನು ಶ್ವಾನ ಪ್ರಿಯರ ಕ್ಲಬ್ ನೀಡಿದ ಸದಸ್ಯತ್ವವನ್ನೂ ಕಿತ್ತುಕೊಳ್ಳುವ ಸಾಧ್ಯತೆ ಇದೆ. ಇಷ್ಟೇ ಏಕೆ, ಇದೊಂದು ಅಂತರ ರಾಷ್ಟ್ರೀಯ ಆರ್ಥಿಕ ಸಮಸ್ಯೆಯೂ ಆಗಲಿದೆ. ಏಕೆಂದರೆ ಶ್ವಾನಗಳಲ್ಲಿ ಆದ ಈ

ಕ್ರಾಂತಿಕಾರಿ ಬದಲಾವಣೆಯ ಗುಮಾನಿ ವಿದೇಶೀ ವಿಜ್ಞಾನಿಗಳಿಗೆ, ಪತ್ರಿಕೆಯವರಿಗೆ ತಿಳಿದರೆ ಜಾಗತಿಕ ಮಾರುಕಟ್ಟೆ ಏರುಪೇರಾಗುವ ಸಂಭವವಿದೆ. ಏಕೆಂದರೆ ಶ್ವಾನಗಳಲ್ಲಾದ ಈ ಬದಲಾವಣೆ ಅವುಗಳ ಮಾಂಸದ ರುಚಿಯಲ್ಲಿಯೂ ಬಂದಿದ್ದರಂತೂ ಮುಗಿದೇ ಹೋಯಿತು. ಏಕೆಂದರೆ ಶ್ವಾನ ಮಾಂಸ ಪ್ರಿಯರಾದ ಚೀನ, ಕೊರಿಯ ಮುಂತಾದ ದೇಶದವರು ತಮ್ಮ ಊಟ ಪಟ್ಟಿ ಅಂದರೆ ಮ್ಯೆನ್ಯೂದಿಂದ ಇದನ್ನು ತೆಗೆದು ಬಿಟ್ಟರೆ ಶ್ವಾನ ಮಾಂಸಕ್ಕೆ ಬೆಲೆ ಬಿದ್ದು ಹೋಗಿ ಅವುಗಳ ಮಾಲೀಕರಿಗೆ ನಾಯಿಪಾಡು ಆಗುತ್ತದೆ. ಇದರಿಂದ ನಮ್ಮ ಹಾಗೂ ಇತರೆ ದೇಶಗಳ ನಡುವಣ ರಾಜಕೀಯ ಸಂಬಂಧಗಳೇ ಕೆಟ್ಟುಹೋಗಬಹುದು. ಆದ್ದರಿಂದ ರಾಷ್ಟ್ರದ ಈ ಗುಟ್ಟು ಶ್ವಾನ ಸಂತತಿಯ ಮೂಲಕ ರಟ್ಟಾಗುವ ಮುನ್ನ ನೀವು ನಿಮ್ಮ ನಾಯಿಯನ್ನು ಕಟ್ಟಿ ಹಾಕುತ್ತೀರೆಂಬ ನಂಬಿಕೆಯಿಂದ ಈ ಪತ್ರ ಬರೆಯುತ್ತಿದ್ದೇನೆ. ನೀವು ನನ್ನ ಈ ಪತ್ರ ಓದಿ, ನನ್ನ ಈ ಸೂಚನೆಯನ್ನು ಅಂಗೀಕರಿಸಿದ್ದೇ ಆದರೆ ನನಗೂ ವೈಯಕ್ತಿಕವಾಗಿ ಒಂದು ಲಾಭವಿದೆ. ಅದೇನೆಂದರೆ, ಪ್ರತಿ ದಿನ ನಾನು ನನ್ನ ಕಾರಿನ ಗಾಲಿಗಳನ್ನು ತೊಳೆಯುವ ಕೆಲಸ ತಪ್ಪುತ್ತದೆ.

ಇಂತೀ ಗುರುವ.



"ಭಾರತ ಸೋತರು ಅಂತ ನನ್ನ ಯಾಕೆ ಬೈತೀಯ ತಾತ?"

# ದುಷ್ ಮತ್ತು.. ಶಕ್ಕು..

(ಹೊಸ ಐತಿಹಾಸಿಕ ಕಥೆ)
- ಚಿತ್ರಕಥೆ: ಶಿವು
- ಚಿತ್ರ ರಚನೆ: ಬಾಗೂರು
- ಚಿತ್ರ ಹಿಂಸೆ: ಓದುಗರಿಗೆ

ನಮ್ಮ ಭಾರತಖಂಡದಲ್ಲಿ, ಸಾಮ್ರಾಜ್ಯಗಳು ಬಂದವು ಎರಡೇ. ನೂರಾರು ಅಲ್ಲ.... ಸಾವಿರಾರು. ಇದಕ್ಕೆಲ್ಲ ಕಾರಣ ಪುರುಷ ಒಬ್ಬ ಇರಲೇಬೇಕಲ್ಲ. ಅಲ್ಲ, ನಿಮ್ಮ ಊಹೆ ತಪ್ಪು. ಅವನು ವಿ.ಪಿ.ಸಿಂಗ್ ಅಲ್ಲ, ನನ್ನೂ ಕೂಡ ಅಲ್ಲ. ಬಾಬರ್ ಅಲ್ಲದೇ ಜೊತೆಗೆ ಅಶೋಕ ಕೂಡ ಅಲ್ಲ. ಇದಕ್ಕೆಲ್ಲಾ ಮೂಲ ಪುರುಷ ಒಬ್ಬನೇ. ಅವನೇ ರಾಜಾ----- ----ದುಷ್-ಯಂತ!




ರಾಜಾ ದುಷ್ಯಂತ ಒಮ್ಮೆ ಬೇಟೆಗಾಗಿ ಕಾಡಿಗೆ ಹೊರಟ. ಬೇಟೆ ಬೇಗನೆ ಸಿಕ್ಕಿತು...........!?




ಮಾತಾಡ್ತಾ, ಮಾತಾಡ್ತಾ, ದುಷ್ ಮತ್ತು ಶಕ್ಕು ಮನ್ಮಥನ ಬಾಣಗಳಿಗೆ ಗುರಿಯಾದರು. ಶಕುಂತಲೆ ರಕ್ಷಣೆಗೆಂದು... ಕಣ್ವರು ಬಿಟ್ಟಿದ್ದ ಕಾಯುವ ಪೋಲರಾಯಿಡ್ ರೋಬೊ... ಕ್ಯಾಮರಾಗಳನ್ನು, ಪ್ರೇಮಿಗಳು ದುಂಬಿಗಳೆಂದು ಭಾವಿಸಿದರು.









ಅ.ನ.ಕೃ. ಕಾದಂಬರಿಯಲ್ಲಿ ಹೇಳುವಂತೆ ಪ್ರಣಯಿಗಳ ಪ್ರೇಮ ವೃಕ್ಷ ಹಿರಿಯದಾಗಿ ಬೆಳೆದು ಫಲ ಕೊಟ್ಟಿತು. ಆ ಫಲವೇ ಭರತ.




ಕಣ್ವರ ಆದೇಶದ ಮೇರೆಗೆ ಶಕುಂತಲಾ ಭರತನನ್ನ ಕರಕೊಂಡು.... ......ದುಷ್ಯಂತನ ಆಸ್ಥಾನಕ್ಕೆ ಬಂದಳು.


















ನೀತಿ:-'ನಂದೇನೂ ತಪ್ಪಿಲ್ಲ' ಅಂತ... ಭಾರತೀಯರಿಗೆ ಬಹು ಸುಲಭವಾಗಿ ಸಿಗುವ ಸಬೂಬು ಎಲ್ಲಿಂದ ಬಂತು ಅಂತ ಈಗ ಗೊತ್ತಾಯಿತಲ್ಲಾ!

—: ಶುಭಾಶಯಗಳೊಂದಿಗೆ:—

# ಯಕ್ಷ ದೇಗುಲ

ಈಗಾಗಲೇ ಸಾವಿರಾರು ಯಕ್ಷಗಾನ ಕಾರ್ಯಕ್ರಮಗಳನ್ನು
ನೀಡಿರುವ ಜನಪ್ರಿಯ ಯಕ್ಷಗಾನ ತಂಡ,
"ಯಕ್ಷ ದೇಗುಲ"
ಕಾರ್ಯಕ್ರಮಗಳಿಗೆ ವಿಚಾರಿಸಿರಿ:

## ಕೆ. ಮೋಹನ್

143/73, 6ನೇ ಕ್ರಾಸ್
3ನೇ ಬ್ಲಾಕ್
ತ್ಯಾಗರಾಜ ನಗರ, ಬೆಂಗಳೂರು 560 028



"ಹಲೋ ವನಜಾನಾ? ಯಾಕೋ ಕೇಳಿಸ್ತಾನೇ ಇಲ್ಲಾರೀ, ತುಂಬಾ ಡಿಸ್ಟರ್ಬೆನ್ಸು. ಇರ್ಲಿ, ಕೊನೆಗೂ ಫೋನ್ ಬಂತೂರೀ ನಮ್ಮನೇಗೆ. ಪಕ್ಕದ್ಮನೆ ವಾಣಿ ವಿಷಯ ಕೇಳಿದ್ರಾ, ಸಿತಾರ್ ಟೀಚರ್ ಜೊತೆ ಓಡಿ ಹೋಗಿದ್ದು. ಆಚೆಮನೆ ಪ್ರಕಾಶನಿಗೆ ಏನು ಬಂತ್ರೀ ಕೇಡು! ಸಾಬರ ಹುಡ್ಗಿ ಜೊತೆ ಓಡಾಡ್ತಾನಂತೆ! ರೀ ವನಜಾ ಕೇಳಿಸ್ತಾ ಇದ್ಯೇನು? ......"


ಇನ್ನೂ ಕನೆಕ್ಷನ್ನೆ ಕೊಟ್ಟಿಲ್ಲ. ಹೇಗೆ ಕೇಳಿಸುತ್ರಮ್ಮ!

# ಬೂಮೆರಾಂಗ್

-ಕಮಲಾ ರಾಮಸ್ವಾಮಿ.

ಹಳೇ ಕಡತಾನೆಲ್ಲಾ ತೆಗೆದು, ಬೇಡವಾಗಿದ್ದನ್ನು ಬಿಸಾಕೋಣ ಎಂದು ಕೂತೆ. ''ಹೊರನಾಡ ಕನ್ನಡಿಗರ ಬಳಗ ಭಿಲಾಯಿ''ಎಂಬ ತಲೆಬರಹವಿದ್ದ ಕಾಗದ ಸಿಕ್ಕಿತು. ಕಣ್ಣು ಹಾಯಿಸಿದೆ. ಹೆಸರಿನ ಪಟ್ಟಿ. ಅದರ ಪಕ್ಕದಲ್ಲಿ ಅವರು ಮಾಡಬೇಕಾದ ಅಡಿಗೆಯ ಹೆಸರು- ಎಲ್ಲಾ ಎಲ್ಲಿದಾರೋ! ಹಳೇ ನೆನಪು ಸುರಳಿ ಸುರಳಿಯಾಗಿ ಬಿಚ್ಚಿಕೊಂಡಿತು.

ಅಂದು, ಆ ಸಂಜೆ ಎಲ್ಲರಿಗೂ ಅದೆಷ್ಟು ಸಂಭ್ರಮ. ಆಗ ಈಗ, ಯಾವಾಗಲಾದರೂ ಒಮ್ಮೆ ಎಲ್ಲಾ ಸೇರುತ್ತಿದ್ದೆವು. usual ಆಗಿ Pool dinner ಅಂತ ಸೇರಿ, ಎಲ್ಲಾರ ಮನೆ ಅಡಿಗೆಯ ರುಚಿ ನೋಡಿ, ಹರಟೆ, ಹಾಸ್ಯ, ಸಂಗೀತ, ಭಾವಗೀತೆ ಎಲ್ಲಾ ಕಲಾಪಗಳೂ ನಡೆದು, ಚದರುವುದು ವಾಡಿಕೆ. ಎಲ್ಲಾರಿಗಿಂತ Organise ಮಾಡುವವರಿಗೇ ಹೆಚ್ಚು ತಳಮಳ, ಆತಂಕ. ಈ ಸಾರಿಯ ವ್ಯವಸ್ಥೆ ಗೆಳತಿ ಸೀತಾಲಕ್ಷ್ಮಿ ಮತ್ತು ನನ್ನ ಪಾಲಿಗೆ ಬಂದಿತ್ತು.

ಸರ್‍ಯಾಗಿ ಏಳು ಘಂಟೆಗೆ ಕಾರ್ಯಕ್ರಮ ಶುರುವಾಯಿತು. ಒಬ್ಬೊಬ್ಬರಾಗಿ ನಮ್ಮವರೆಲ್ಲಾ ಬರತೊಡಗಿದರು. ಮಾಡಿದ ಪದಾರ್ಥವನ್ನು ತಂದು ಟೇಬಲ್ ಮೇಲೆ ಇಟ್ಟರು. Mr. & Mrs. ಐಯ್ಯಂಗಾರ್ ಬಂದರು. ಭಿಲಾಯಿಗೆ ಹೊಸದಾಗಿ ಬಂದಿದ್ದ ದಂಪತಿಗಳು. ''ಬನ್ನಿ ಬನ್ನಿ ತಾವಿಬ್ಬರೂ ಬಂದದ್ದು ತುಂಬಾ ಸಂತೋಷ'' ಅಂದೆ. ''It's wonderful to meet like this. Thanks a lot'' ಅಂದ್ರು ಐಯ್ಯಂಗಾರ್. ಆತ ಕನ್ನಡದಲ್ಲಿ ಮಾತಾಡಿದ್ದೇ ನಾನು ನೋಡಿಲ್ಲ. ಆತನ ಹೆಂಡತಿ ಯೂರೋಪಿಯನ್. ಆದ್ದರಿಂದ ಆಕೆಗೆ ನೋವಾಗಬಾರದೆಂದು ಹಾಗೆ ಮಾತಾಡುತ್ತಿದ್ದರು ಅಂದ್ಕೊಂಡೆ. ಆಕೆ ಲಕ್ಷಣವಾಗಿ ನಮ್ಮ ಹಾಗೇ ರೇಷ್ಮೆ ಸೀರೆ ಉಟ್ಟು, ತುರುಬು ಹಾಕಿ, ಹೂ ಮುಡಿದು, ಕುಂಕುಮ ಹಚ್ಚಿಕೊಂಡು ಬೂದಿದ್ದರು. ಎತ್ತರ, ಗಾತ್ರ ಇದ್ದ ಆಕೆ ಎಲ್ಲಾರ ಕಣ್ಸೆಳೆದಿದ್ದು ಆಚ್ಚರಿಯೇನಲ್ಲ.

ಆಕೆ ಬಂದಿದ್ದೇ ತಡ. ಶುರುವಾಯಿತು ಗುಸುಗುಸು. ನೆರೆದಿದ್ದ ನಾರೀ ಬಳಗ- Birds of the same feather ವಟವಟ ಶುರು ಮಾಡಿದರು. ''ಯಾರ್ರೀ ಈಕೆ?'' ''ಓಹೋ ಐಯ್ಯಂಗಾರರ foreign trip ನ ಪರಿಣಾಮ'' ಅಂತ ಶುರುವಾಯಿತು. ಆದರೆ ನಮ್ಮ ವನಜಾಕ್ಷಮ್ಮ ಬಂದವರೇ ತಮ್ಮ ಗೊಗ್ಗರು ಧ್ವನಿಯಲ್ಲಿ ''ಯಾರೇ ಈ ಯಕ್ಷಗಾನದ ಮೋಹಿನಿ?'' ಅಂದಾಗ, ವಯಸ್ಸಾದ ಆಕೆಗೆ ''ಸ್ವಲ್ಪ ದಯಮಾಡಿ ಮೆಲ್ಲಗೆ ಮಾತಾಡಿ ವನಜಾಕ್ಷಮ್ಮ. ಅವರೇ ಹೊಸದಾಗಿ ಬಂದಿರೋ ಶ್ರೀಮತಿ ಐಯ್ಯಂಗಾರ್'' ಎಂದು ಬೇಡಿದೆ. ''ಏನು ಮಾಡ್ಕೊಂಡು ಬಂದಿದ್ದಾಳೋ'' ಘಂಟೆ ಬಾರಿಸಿದ ಹಾಗೆ ಕೇಳಿದಾಗ, ''ಕೋಸಂಬರಿ'' ಸೀತಾಲಕ್ಷ್ಮಿ ಬೇಗ ಹೇಳಿದರು. ''ಬಹಳ ಕಷ್ಟ ಕೊಸುಂಬ್ರಿ ಮಾಡೋದು'' ಕೊಂಕು ಮಾತಿನ ಕೋಕಿಲ ನುಡಿದರು.

''ಅಯ್ಯೋ! ಆಕೆ ಏನು ಮಾಡಿದ್ದಾಳು. ಎಲ್ಲಾ ಐಯ್ಯಂಗಾರರ ಕೈವಾಡ ಇರ್ಬೇಕು'' ಜಯಾ ಟೀಕಿಸಿದರು

"ಎಷ್ಟು ನಾಜೂಕಾಗಿ, ಸಣ್ಣಗೆ, ಒಂದೇ ಸಮನೆ ಹೆಚ್ಚಿದ್ದಾರೆ" ಅಂತ ಒಬ್ರಂದಿದ್ದಕ್ಕೆ, "ಅಯ್ಯೊ ಯಾರೋ ಮಾಡಿಕೊಟ್ಟಿದ್ದಾರೆ. ಈ ಬಣ್ಣದ ಬೀಸಣಿಗೆ ಏನು ಮಾಡೀತು" ವನಜಾಕಮ್ಮ verdict ಕೊಟ್ಟುಬಿಟ್ಟರು.

"ಏನ್ರೀ ಇಷ್ಟೊಂದು comments ಮಾಡ್ತಾ ಇದ್ದೀರ, ಆಕೆಗೆ ಕೇಳ್ಸೊದಿಲ್ವ? ಇಲ್ಲೇ ನಿಂತಿದ್ದಾರೆ ಆಕೆ" ಎಂದೆ. "ನಾವೆಲ್ಲಾ ಕನ್ನಡದಲ್ಲೇ ಹರಟ್ತಾ ಇದ್ದೀವಿ, ಅವ್ರಿಗೆ ಏನೂ ಅರ್ಥವಾಗುಲ್ಲ ಬಿಡಿ" ಅಂತ ನನಗೆ ದಬಾಯಿಸಿದರು.

ಊಟ ಮುಗಿಯಿತು. ಹೆಂಗಸರ ಕಡೆಯಿಂದ ಯಾರಾದರೂ ವಂದನಾರ್ಪಣೆ ಮಾಡ್ತೀರಾ ಅಂತ ಕೇಳಿದ್ರು. ಹೊಸ member Mrs. Iyengarನ ಕೇಳಿದೆ. "would you mind speaking a few words about this evening?"

"oh sure! It's my pleasure" ಅಂದ್ರು.

ಎದ್ದು ನಿಂತು ವಂದನಾರ್ಪಣೆ ಶುರು ಮಾಡಿದ್ರು. "ನನ್ನ ಪ್ರಿಯ ಕನ್ನಡದ ಅಕ್ಕ ತಂಗಿಯರೇ" ಅಂದಾಗ ಹಾಲಿಗೇ ಹಾಲೇ ಸ್ತಬ್ಧ. ನಾವೆಲ್ಲಾ ನಿಸ್ತೇಜರಾಗಿದ್ದು ಕಂಡು ಆಕೆ ನಗುತ್ತಾ ಹೇಳಿದರು. "ನಾನು ಹುಟ್ಟಿದ್ದು ಬೆಳೆದಿದ್ದು ಎಲ್ಲಾ K.G.F.ನ ಉರಿಗಾಂನಲ್ಲಿ. ನಮ್ಮ ತಂದೆ ಅಲ್ಲಿ Mineನಲ್ಲಿ ಕೆಲಸದಲ್ಲಿದ್ದರು. ನನ್ನ ಓದು, ಬರಹ ಎಲ್ಲಾ ಕನ್ನಡದಲ್ಲೇ ಆಗಿದ್ದು. ನನಗೆ ಕನ್ನಡ ಬರೋವಷ್ಟು ನನ್ನ ಮಾತೃ ಭಾಷೆಯೇ ಬರುವುದಿಲ್ಲ..."

---

## ಅಥವಾ ವೇದ

ಹಾಲಲ್ಲಾದರೂ ಹಾಕಿ
ಅಥವಾ
ನೀರಲ್ಲಾದರೂ ಹಾಕಿ
ಕಾಲಲ್ಲಾದರೂ ಹಾಕಿ
ಅಥವಾ
ಕೋಲಲ್ಲಾದರೂ ಹಾಕಿ
ಕೋಲಲ್ಲಾದರೂ ಹಾಕಿ
ಅಥವಾ
ಗೋಲಲ್ಲಾದರೂ ಹಾಕಿ
ದೇವರ ಮೇಲೆ
ಭಾರ ಹಾಕಿ
ಆಡುತ್ತೇವೆ ಹಾಕಿ!

**–ಎಚ್. ಡುಂಡಿರಾಜ್**

# ಆತ್ಮಾವಲೋಕನ

-ಜಿ.ಎನ್.ಜಿ.

ತನ್ನನ್ನು ತಾನು ನೋಡಿಕೊಳ್ಳುವುದನ್ನು ಬೆಳೆಸಿಕೊಳ್ಳಬೇಕು. ಆತ್ಮಾವಲೋಕನ ಮಾಡಿಕೊಂಡಷ್ಟೂ ಮಾನವನು ಪರಿಶುದ್ಧತೆಯ ಹಂತವನ್ನು ತಲುಪುತ್ತಾನೆ. ಜಿನನಾಗುತ್ತಾನೆ. ಈ ಕಲಬೆರಕೆ ದಿನಗಳಲ್ಲಿ ಪರಿಶುದ್ಧತೆಯನ್ನು ತಲುಪುವುದಕ್ಕೆ ಇರೋ ದಾರಿ ಒಂದೇ "ಆತ್ಮಾವಲೋಕನ"

ಇದಕ್ಕೇ ಎಂದು ಕಾಣುತ್ತದೆ. ಮಾನವನು ಕನ್ನಡಿಯ ಮುಂದೆ ದಿನವೂ ಅಷ್ಟು ಹೊತ್ತು ಕಳೆಯುವುದು. ಪ್ರಾಸಾಧನ ಸಾಮಗ್ರಿಗಳಿಗೆ ಮಾರ್ಕೆಟ್ಟು ಹೆಚ್ಚಿರುವುದು ಮಾನವನು ಆತ್ಮಾವಲೋಕನದ ಹಾದಿ ಹಿಡಿದಾಗಿನಿಂದ.

ಆದರೆ ಪ್ರಾಸಾಧನ ಸಾಮಗ್ರಿಗಳೂ ಕಲಬೆರಕೆಯಾಗಿರುವುದರಿಂದ ಈ ಆತ್ಮಾವಲೋಕಿಗಳ ಮುಖ ಸುಟ್ಟ ಬದನೆಕಾಯಿಯಾಗಿರುವುದು- ಸಿಪ್ಪೆ ಸುಲಿಯೋದು- ಪರಿಶುದ್ಧವಾದ ಮುಖ ಕಾಣಲು ಸಿಗದೇ ಇರುವುದು ಅದೇ ಕಾರಣಕ್ಕೆ ಇರಬೇಕು.

ಮುಖ ಪ್ರಕ್ಷಾಳನ ಮಾಡಿ- ಕೆತ್ತಿ- ಹೆರೆದು- ಇದ್ದ ಬಣ್ಣ ತೆಗೆದು- ನಂತರ ಮೆತ್ತಿ- ಮುಖದ Originality ಕಳೆದು reasonably acceptable ಹಾಗೆ ಕಾಣೋ ಹಾಗೆ ಮಾಡುವ- ಅಂಗಡಿಗಳು ಅದೇ beauty parlour ಗಳು ಬೀದಿಗೆ ನಾಲ್ಕು ಆಗಿರೋದು.

ಈಗ ನಿಜಕ್ಕೂ ಬೆಳಗಿನಿಂದ ಸಂಜೆವರೆಗೆ reasonably acceptable ಆಗಿರೋ ಮುಖ ಸಂಜೆ ಕಳೆದು- ರಾತ್ರಿಯಾದಾಗ close quarters ನಲ್ಲಿ ಭಯಾನಕವಾಗಿ ಕಂಡು- ಬರೋದರಿಂದಲೋ ಏನೋ- ಜನ quarter ಹಾಕಿಕೊಂಡೇ ಮನೆಗೆ ಬರೋದು. ಗುಂಡಿನ ಗುಂಗಿನಲ್ಲಿ- ಯಾವುದೂ acceptable ಆಗೇ ಕಾಣುತ್ತದೆ. ಇದಕ್ಕೆ ಇರಬೇಕು beauty parlourಗಳೂ- Pub corner ಗಳೂ almost ಅಕ್ಕ ಪಕ್ಕದಲ್ಲೇ ಇರೋದು.

ಆದರೆ ಇದ್ಯಾವುದರ influence ಇಲ್ಲದ ನನಗೆ ಈಗಲೂ ಕನ್ನಡಿ ಮುಂದೆ ನಿಂತಾಗ ಅಪಾರವಾದ ದುಃಖವಾಗುತ್ತದೆ. ಕಟ್ಟೆಯೊಡೆದು ಹರಿದು ಬರುತ್ತದೆ ಕಣ್ಣೀರು. ದೇವರು ಹೀಗೇಕೆ ಮಾಡಿದ? ಎಂದು ಆ ಸೃಷ್ಟಿಕರ್ತನ ಮೇಲೆ ಅಪಾರವಾದ ಕೋಪ ಬರುತ್ತದೆ. ಸುಮಾರು ಕನ್ನಡಿಗಳನ್ನು ಒಡೆದು ಹಾಕಿದ್ದೇನೆ. ನನ್ನ ಮುಖ ಬದಲಾಗಿಲ್ಲ.

ಇದು ನನ್ನನ್ನು ಅಷ್ಟು serious ಆಗಿ ಕಾಡಿರಲಿಲ್ಲ. ನಾನು ಹೈಸ್ಕೂಲಿನಲ್ಲಿ ಓದೋವಾಗ ನಾಟಕದಲ್ಲಿ ಪಾರ್ಟು ಕೇಳಲು ಹೋಗಿದ್ದೆ.

ಆಗ ಮೇಷ್ಟ್ರು ಕನ್ನಡೀಲಿ ಮುಖ ನೋಡಿಕೋ ಹೋಗಯ್ಯ- ಇವನಿಗೆ ಪಾರ್ಟು ಬೇರೆ ಬೇಕಂತೆ'' ಎಂದಿದರು.

ಆಗ ನನಗೆ ಕೋಪ ಬಂದದ್ದು ಮೇಷ್ಟ್ರ ಮೇಲೆ ಹೊರತು ನನ್ನ ಮುಖದ ಮೇಲೆ ಅಲ್ಲ. ಎಲ್ಲರೂ ತಾನು ಚೆನ್ನಾಗಿಯೇ ಇದ್ದೇನೆ ಎಂಬ ಭಾವನೆಯಿಂದಲೇ ಬದುಕಿರುತ್ತಾರೆ. ಆ ಭಾವನೆಯೇ ಅವನನ್ನು ಬದುಕಿರುವಂತೆ ಮಾಡಿರೋದು. ಆ ಭಾವನೆಗಳಿರೋದರಿಂದಲೇ ಕನ್ನಡಿಗಳು ಈ ಪಾಟಿ ದುಬಾರಿಯಾಗಿರೋದು.

ಕಾಲ ಕಳೆದಂತೆ- ''ಅಹಂ ಅಳಿದಂತೆ- ಸ್ವಂತ ಬೆಲೆ ಇನ್ನೊಬ್ಬರಿಂದ ತಿಳಿದಂತೆ- ಯೋಗ್ಯತೆಯ ಅರಿವಾದಂತೆ- ತನ್ನ ಬೆಲೆ ಇಷ್ಟೇನೇ? ಎಂದು ತಿಳಿದಂತೆ- ಲೌಕಿಕದಲ್ಲಿ ಬೆಲೆ ಕಡಿಮೆಯಾದಂತೆ-ಬೇಡವಾಗಿದ್ದರೂ ಮನಸ್ಸು ಪಾರಮಾರ್ಥದ ಕಡೆ ಹೊರಳುತ್ತದೆ. ಅದರಲ್ಲಿ ಯಾವ ಉದ್ಧಾರವಿಲ್ಲದಿದ್ದರೂ- ಪರನಿಂದೆಯಿಂದ- ತಪ್ಪಿಸಿಕೊಳ್ಳುವ ಪಲಾಯನವಾದ. ತನ್ನ ಮುಖ reasonably acceptable ಅಲ್ಲ ಎಂಬ ಕಟು ಸತ್ಯವನ್ನು ಒಪ್ಪಿಕೊಳ್ಳದ ಮನಸ್ಸಿನ ಕಳ್ಳತನ.

ಅದು ಏನೇ ಇರಲಿ ನಾನು- ಬುದ್ಧನೂ ಅಲ್ಲ- ಬಸವನೂ ಅಲ್ಲ. ತತ್ವಮಸಿಯನ್ನು ಅರಿತವನೂ ಅಲ್ಲ- ಎಲ್ಲರಂತೆ ಒಬ್ಬ ಎಡಬಿಡಂಗಿ- ಅದ್ದರಿಂದಲೇ ಲೌಕಿಕದಲ್ಲೇ- ಎಲ್ಲರಂತೆ ಒಂದಾಗಿರಲು ಪ್ರಯತ್ನಿಸಿದರೂ- ಯಾಕೋ ಸಮಾಜ ನನ್ನನ್ನು fish out of pond ಮಾಡಿ- ವಿಲವಿಲನೆ ಒದ್ದಾಡುವಂತೆ ಮಾಡುತ್ತದೆ.

ನನ್ನ ಈ ಮುಖ ಇತರರಿಗೆ- ಮನರಂಜನೆಗೆ ಕಾರಣವಾಗಿದೆ ಎಂದು ನನಗೆ ಗೊತ್ತು. ಹೀಗಾದರೂ- ಪರರವರಿಗೆ ಆನಂದವನ್ನು ಉಂಟುಮಾಡುತ್ತಿದ್ದೇನೆ ಎಂಬ ಸಂತೋಷ ಒಂದು ಕಡೆಯಾದರೆ ಇನ್ನೊಂದು ಕಡೆ ಆ ಕ್ಷಣದಲ್ಲಿ ಮುಖದ ಮೇಲೆ ಅಪಾರವಾದ ದ್ವೇಷ.

ಈಚೆಗೆ ಕನ್ನಡಿಯನ್ನು ನೋಡಿಕೊಳ್ಳುವುದನ್ನೇ ಬಿಟ್ಟಿದ್ದೇನೆ. ಕನ್ನಡಿಯ ಮೇಲಿನ ದ್ವೇಷವಲ್ಲದಿದ್ದರೆ- ''ಆ ಮುಖ''ವನ್ನು ನೋಡಬೇಕಲ್ಲ ಎಂಬ ಭಯ- ಅಥವಾ- ನನ್ನ ಮುಖದ ಮೇಲಿನ ಅನುಕಂಪ.

ಈಗ ನನ್ನ ಬಾಳಿನಲ್ಲಿ ಕೆಲವು ಬದಲಾವಣೆಗಳನ್ನು ಜಾರಿಗೆ ತಂದಿದ್ದೇನೆ- ಹೆಂಡತಿಯ ಜೊತೆಗೆ ಹೋಗುವುದನ್ನು ಬಿಟ್ಟಿದ್ದೇನೆ- ಜೊತೆಗೆ ಹೋದರೆ- ಅವಳಿಗೂ ಇರಸು ಮುರಸು- ನನಗೂ ಜಿಗುಪ್ಸೆ. ಅವಳೇನೂ ಹೆಲನ್ನೊ ಅಲ್ಲಾ- ಕ್ಲಿಯೋಪಾತ್ರಳೂ ಅಲ್ಲ. ಆದರೆ- ಅವಳ ಜೊತೆ ನಾನಿದ್ದರೆ- ನಿಜಕ್ಕೂ ಅವಳು ಹೆಲನ್ನೇ- ನಾನು Paris ಅಲ್ಲ- ಅವಳೊಡನಿದ್ದಾಗ peevishu. ಅದು ದೇವರಾಣೆ ಅವಳ ತಪ್ಪಲ್ಲ- ನನ್ನ ಮುಖದ್ದು.

ನಾನು ಒಬ್ಬನೇ ಹೋದರೆ- ಹ್ಯಾಗೋ ಕೆಲಸ ಪೂರೈಸಿಕೊಂಡು ಬರುತ್ತೇನೆ. ಇಲ್ಲಿ ಮರ್ಯಾದೆ- ಅವಮರ್ಯಾದೆ ಪ್ರಸಂಗವಿರೋಲ್ಲ. ಹ್ಯಾಗೂ ಒಬ್ಬನೇ ಇರ್ತೀನೆ. ಏನಾದರೂ ನನಗೇ ಆಗಿರುತ್ತದೆ. ಅದಕ್ಕೆ evidence ಇರೋದಿಲ್ಲ. ಬಚಾವು ಬಿದ್ದು ಮೀಸೆ ಮಣ್ಣಾಗಿದ್ದರೂ- ಬಿದ್ದವನಿಗೊಬ್ಬನಿಗೇ ಗೊತ್ತಿರುತ್ತದೆ ಅಷ್ಟೆ.

ನಾನು ಈ ಥರಾ ಒಂಟಿ ಪಯಣದ ತೀರ್ಮಾನಕ್ಕೆ ಧಿಡೀರ್ ಎಂದು ಬಂದಿಲ್ಲ. ಸಾಕಷ್ಟು ಅನುಭವಿಸಿಯೇ ಬಂದಿದ್ದೇನೆ. ಆತ್ಮಾನುಭವದ ಫಲಶ್ರುತಿ ಇದು.

ಇಬ್ಬರೂ ಜೊತೇಲಿ ಹೋದಾಗ- ಅದು ಯಾಕೋ- ಯಾರೂ ನಮ್ಮನ್ನು ಗಂಡ ಹೆಂಡತಿ ಎಂದು ತಿಳಿಯೋದೇ ಇಲ್ಲ. ಇವಳು ನನಗಿಂತಲೂ ಒಂದು ಅಂತಸ್ತು ಮೇಲೆಯೇ ಇರ್ತಾಳೆ. ಜನರಿಗೆ ನಾವು ಪತಿ-ಪತ್ನಿಯರೆಂದು ತಿಳಿಯೋಲ್ಲವ್ರೋ ಅಥವಾ ತಿಳಿದೂ ಹಾಗೆ ಆಡುತ್ತಾರೋ- ಭಗವಂತ ಬಲ್ಲ.

ಮಾವಿನ ಹಣ್ಣಿನ ಕಾಲ- ಇಬ್ಬರೂ ಮಾರ್ಕೆಟ್ಟಿಗೆ- ಮಾವಿನ ಹಣ್ಣು ತರಲು ಹೋಗಿದ್ದೆವು. ಅವನು ಡಜನ್ನಿಗೆ ಮೂವತ್ತು ಎಂದಿದ್ದ. ನಾನು ದುಬಾರಿ- ಬೇರೆ ಕಡೆ ನೋಡೋಣಾ ಎಂದಿದ್ದೆ. ಅದಕ್ಕೆ ಅಂಗಡಿಯಾತ "ನೀನು ಸುಮ್ಮನೆ ಇರಯ್ಯಾ- ಅಮ್ಮಾವರು ಯಾವಾಗಲೂ ಇಲ್ಲೇ ತಗಳ್ಳೋದು- ಎಂದು ಎಗರಾಡಿದ್ದ.

ಬಟ್ಟೆ ಅಂಗಡಿಗೆ ಹೋದರೆ- "ಬನ್ನಿ ಅಮ್ಮಾ ಅವರೆ- ಹೊಸ ನಮೂನೆ ಸೀರೆಗಳು ಬಂದಿವೆ" ಎಂದು ಸ್ವಾಗತ. ಆಪ್ಪಾದರೆ ಸರಿ- ಇನ್ನೂ ಮುಂದಕ್ಕೆ ನೋಡಿ. "ಒಳ್ಳೆಯ shirting-suiting ಗಳೂ ಬಂದಿವೆ- ನಿಮ್ಮ ಯಜಮಾನರನ್ನು ಕರೆದುಕೊಂಡು ಬರಬೇಕಾಗಿತ್ತು" ಎಂದ. ಈಗ ನಾನು ಏನು ಮಾಡಬೇಕು- ಇವಳ ಮೇಲೆ ಅನುಮಾನ ಪಡಲೆ? ಛೆ! ಛೆ!- ನಾನು ಅವನ ಕಣ್ಣಿಗೆ ನಾನಾಗಿ ಕಂಡಿಲ್ಲವೆ? ಇದು ಅವನ ಕುಚೇಷ್ಟೆಯೇ? ನಾನು ಯಾವುದನ್ನು ಸರಳತೆ ಎಂದು ತಿಳಿದಿದ್ದೆನೋ- ಅದು ಅವರಿಗೆ ಬೇರೆಯಾಗಿ ಕಂಡಿದೆಯೆ? ಸಧ್ಯ ಬದುಕಿದೆ- ನನ್ನಾಕೆ "ಇವರೇ ನಮ್ಮವರು- ಇವರು ಸೂಟು ಹಾಕೋದಿಲ್ಲ" ಎಂದು ಹೇಳಿದ್ದಳು. ಆಗ- ಅಂಗಡಿಯಾತ 'ಕಿಸಕ್ಕನೆ' ನಗಬೇಕು ಯಾಕೆ!

ವೀಳೆಯದೆಲೆ ಮುದುಕಿ ನಾನು ಎಳೆಯ ಎಲೆಗಳನ್ನು ಆರಿಸಲು ಹೋದರೆ "ಇವರ್‍ಯಾಕೆ? ಈ ವಜ್ಜನ್ನ ಕರ್ಕಂ ಬಂದೀಯವ್ವ? ಒಬ್ಬಾಕೀನೇ ಬರೋದು ಬಿಟ್ಟು" ಎಂದು ರೇಗಿದ್ದಳು.

ಬೆಂಗಳೂರಿಗೆ ಹೋಗಿದ್ದೆವು. ನಾನು ಆಗಲೇ ಕನ್ನಡಿ ನೋಡಕೊಳ್ಳೋದನ್ನು ಬಿಟ್ಟು ಹದಿನೈದು ದಿನಗಳಾಗಿದ್ದವು- ಮುಖ ಕ್ಷೌರ ಮಾಡಿಕೊಂಡಿರಲಿಲ್ಲ. ಬೆಂಗಳೂರಿನಲ್ಲಿ B.T.S. ನಲ್ಲಿ ಇಬ್ಬರೂ ಹೋಗುತ್ತಿದ್ದೆವು. ಬಸ್ಸು ವಿಲ್ಸನ್‌ಗಾರ್ಡನ್ ಬಳಸಿಕೊಂಡು ನಿಮ್ಹಾನ್ಸ್ ಕಡೆ ಹೋಗ್ತಾ ಇತ್ತು. ಪಕ್ಕದ ಸೀಟಿನಲ್ಲಿದ್ದೋರು ನಮ್ಮ ಕಡೆ ನೋಡುತ್ತಾ,

"ಪಾಪ! ಹೆಣ್ಣು ಜೀವನ ಕಷ್ಟ ಕಣ್ರೀ- ಗಂಡನಿಗೆ- ಹೀಗಾಗಿ ಬಿಟ್ಟರೆ? ಆದರಲ್ಲೂ- ಹುಚ್ಚೂ ಅಂದರೆ- ತುಂಬಾ ಕಷ್ಟಾನೇ- ನೋಡಿದರೇ ಗೊತ್ತಾಗೋಲ್ಲವೇ- ಶಾನೆದಿನದಿಂದ ಇರಬೇಕು ಆತನಿಗೆ" ಎಂದು ಮಾತನಾಡಿಕೊಳ್ಳುತ್ತಿದ್ದರು.

ಬಸ್ಸಿನ ಸಹವಾಸವೇ ಬೇಡಾ ಅಂತ Autoದಲ್ಲಿ ಹೋದರೆ ಡ್ರೈವರ್‍ರು-ಕಾಸನ್ನ ಇವಳನ್ನ ಕೇಳುತ್ತಾನೆಯೇ ಹೊರತು ನನ್ನನ್ನು ಕೇಳುವುದಿಲ್ಲ.

ಇನ್ನೊಂದು ಸಲ ಸಿನಿಮಾದಿಂದ ಬರುತ್ತಿರುವಾಗ- ಯಾವಳೋ ಇವಳ ಹಳೆಯ ಕ್ಲಾಸುಮೇಟಂತೆ- ಸಿಕ್ಕಿದಳು- ನನ್ನನ್ನು ನೋಡಿ "ಯಾರು? ನಿನ್ನ ತಂದೇನಾ? ಯಾವಾಗಿನಿಂದ ಓಗ್?- ನಿನ್ನ ಯಜಮಾನರು ಬಂದಿಲ್ಲವಾ?" ಇವು ಅವಳ ಫ್ರೆಂಡ್ಲಿ ಎನ್‌ಕ್ವೈರಿ.

ಇವರಿಗೆಲ್ಲಾ- ನನ್ನನ್ನು ಕಂಡರೆ ಯಾಕೆ ದ್ವೇಷ?- ಇವರಿಗೆಲ್ಲಾ ನಾನು ಹೇಗೆ ಕಂಡಿದ್ದೇನೆ?

ಸರಿ ಹೆಂಡತಿಯ ಜೊತೆ ಹೋಗೋದು ಬಿಟ್ಟೆ- ಅವಳದು ಏನೂ ತಪ್ಪಿಲ್ಲದಿದ್ದರೂ- ಅವಳು ಹೇಗಿದ್ದರೂ- ಯಾವ ಬಟ್ಟೆ ತೊಟ್ಟಿದ್ದರೂ reasonably acceptable.- ಅದೇ ನಾನು laughing stock in her presence. ಮನೆಗೆ ಬಂದ ಮೇಲೆ ಅವಳಿಂದ ಪುನಃ ಪೂಜೆ.

"ಒಂದಿಷ್ಟು ನೀಟಾಗಿ ಬರೋದಕ್ಕೇನು? ನಿಮ್ಮ Simplicityಗೆ ಬೆಂಕಿ ಹಾಕ್ತು." ಇತ್ಯಾದಿ ಇತ್ಯಾದಿ.

ಒಂಟಿ ಪಯಣ ಪ್ರಾರಂಭವಾಗಿ ಹಲವು ದಿನಗಳಾಗಿದ್ದವು. ಪೇಟೇಲಿ- ಯಾರದ್ದೋ ಪಾಕೆಟ್ಟು- ಪಿಕ್ ಆಗಿತ್ತು. ಗಲಾಟೆ- ಜನ ಸೇರಿದ್ದರು- ಏನು ಗಲಾಟೆ- ನೋಡೋಣಾಂತ- ಗುಂಪಿನಲ್ಲಿ ಮೂಗು ತೂರಿಸಿದೆ. "ಪಕಡ್ರೇ- ಚೋರ್‌ಕು" ಅಂತ ನನ್ನನ್ನೇ ಹಿಡಿದುಕೊಂಡಿದ್ದರು. ನಾನು- ನಾನೇ- ಅಂತ- ಸಾಬೀತು ಮಾಡೋದ್ರಲ್ಲಿ ಸಾಕಾಗಿ ಹೋಗಿತ್ತು.

ಸ್ನೇಹಿತನ ಮಗಳ ಮದುವೆ ಎಂದು ದೊಡ್ಡಂಚಿನ ಪಂಚೆಯುಟ್ಟು- ಜುಬ್ಬಾ ಹಾಕಿಕೊಂಡು- ವಲ್ಲಿಗೆ ಹೊದ್ದುಕೊಂಡು- ಹೋಗಿದ್ದರೆ- ಚಪ್ಪರದಲ್ಲಿ ನನ್ನನ್ನು ಕಂಡು ಪುರೋಹಿತರು,

"ಎಲ್ಲಯ್ಯಾ ಹೋಗಿದ್ದೆ? ಡೋಲು ಬಾರಿಸೋದು ಬಿಟ್ಟು- ನಿನ್ನಿಂದ ಕೆಲಸಾನೇ ನಿಂತಿತ್ತು. ನಡಿ- ನಡಿ" ಎಂದು ಎಳೆದುಕೊಂಡೇ ಹೋಗಿದ್ದರು.

ಇನ್ನೊಂದು ಕಡೆ "ರೀ ಹನುಮಂತ ರಾಯರೇ ಯಾವಾಗ ಬಂದಿರಿ ಊರಿಗೆ?" ಎಂದು ದೂರದಿಂದಲೇ ಕೂಗಿ ಕರೆದು- ಹತ್ತಿರ ಹೋದಮೇಲೆ-

"Sorry- ನೀವಲ್ಲs- ಅವರು ಇನ್ನೂ smart ಆಗಿದಾರೆ" ಎಂದು ಹೋಗೋದೇ.

ಅಂದು ಆಫೀಸಿನ ಬಾಗಿಲಲ್ಲಿ ಬಿಳಿಯ ಸಫಾರಿಯಲ್ಲಿದ್ದ ನನ್ನನ್ನು ಕಂಡ ಒಬ್ಬ ಆಗಂತುಕರು

"ಎಲ್ಲಯ್ಯಾ ನಿಮ್ಮ ಸಾಹೇಬರು?- ಯಾವಾಗ ಬರ್ತಾರೆ?"

ಎಂದು ಆಫೀಸು ಬಾಗಿಲಲ್ಲೇ ನಿಂತ– ಸಾಹೇಬನನ್ನೇ– ಅದೇ ನನ್ನನ್ನೇ ಕೇಳಿದ್ದರು.

ಇದು ಯಾಕೆ? ಹೀಗೆ?– ಎಲ್ಲರಿಗೂ ನಾನು ನಾನಾಗಿ ಕಾಣದೇ– ಬೇರೆ ಬೇರೆಯಾಗಿ ಕಾಣ್ತಾ ಇದೆನಲ್ಲಽ.

ಇದು ಯಾಕೆ? ಹೀಗೆ?

ಈಗ ರಿಟೈರು ಆಗಿದೆ– ಜನಾಭಿಪ್ರಾಯದಿಂದ ಬದುಕಬೇಕಾಗಿಲ್ಲ. ನಾನು– ನಾನಾಗಿ– ನನ್ನ ಮನಸ್ಸಿಗೆ ಬಂದ ಹಾಗೆ ಇರೋಣಾ ಎಂದರೆ ಇನ್ನೂ ಬಿಟ್ಟಿಲ್ಲ ಭೂತ.

ಕೆಲವರಿಗೆ ತತ್ವಜ್ಞಾನಿಯಾಗಿ– ಕೆಲವರಿಗೆ ಹರಿಕಥೆದಾಸನಾಗಿ– ರೋಗಿಯಾಗಿ– ಇನ್ನೂ ಏನೇನೋ ಆಗಿ ಕಂಡಿದ್ದೇನೆ.

ಈಚೆಗೆ ಒಂದು ದಿನ ಧೈರ್ಯ ಮಾಡಿ ಕನ್ನಡಿ ನೋಡಿಕೊಂಡೆ– ಅದರಲ್ಲಿ ಕಂಡ ಮುಖಕ್ಕೆ "ಹಲೋ! ನಿಮ್ಮನ್ನು ಎಲ್ಲೋ ನೋಡಿದ್ದೀನಲ್ಲಾಽ? ಎಂದು ಕೇಳಿಯೇ ಬಿಟ್ಟೆ.



"ಸರಿ, ನಿಂ ಗತಿ ಗೊತ್ತಿಲ್ವೆ?
ಕರೆಂಟಿದ್ರೆ ಸ್ಫೂರ್ತಿ ಇಲ್ಲ,
ಸ್ಫೂರ್ತಿ ಇದ್ರೆ ಕರೆಂಟಿಲ್ಲ!"

# ನೀತಿಯ ಬೇಟೆ

ಡಿ. ಶೇಷಗಿರಿರಾವ್.

---

ಅಡ್ಡರಿ, ಈ ನಮ್ಮ ಸೂರಿ ನೀತಿ ನ್ಯಾಯ ನಿಖರಾಂತ ಯಾವಾಗ್ಲೂ ವಟಗುಟ್ತಾಯಿರ್ತಾನಲ್ಲ, ಯಾಕೆ ತಿಳಿದೇ ಅವನ್ಗೆ ಈ ಕಾಲದಲ್ಲಿ ಶಾಖಾಯ ಲವಣಾಯ ಇಲ್ದೇ ಇದ್ರೆ, ಹೊಟ್ಟೆ ಮೇಲೆ ಒದ್ದೆ ಬಟ್ಟೇ ಗತಿ ಅಂತ. ಇರ್ಲಿ, ಈ ಭಾನುವಾರ ಬರ್ತಾನಲ್ಲ ಕೇಳೇಬಿಡ್ತೀನಿ, ನೀತಿ ನೀತಿ ಅಂತ ಬಡಕೋತೀಯಲ್ಲ ಅದೆಲ್ಲಯ್ಯ ಸಿಗುತ್ತೆ ಅಂತ.

ಭಾನುವಾರ ಬೆಳಗ್ಗೆ ಬಂದೋನೆ ಕಾಫಿ ಗುಟುಗಿಸಿದನೊ ಇಲ್ವೊ ಷುರು ಮಾಡೇ ಬಿಟ್ಟ. 'ನೋಡು, ಶೇಷು, ನೀತಿ ಇಲ್ಲದ ಬಾಳು ಕತ್ತೆ ಜನ್ಮಕ್ಕಿಂತ ಕೀಳು ಕಣಯ್ಯ---' ನಂಗ್ಯಾಕೋ ತಡೆಯೋಕಾಗ್ಲಿಲ್ಲ. 'ಏಯ್, ಹರಿಶ್ಚಂದ್ರನ ಮೊಮ್ಮಗನೆ, ಆ ನೀತಿ ಯಾವ ಅಂಗಡೀಲಿ ಸಿಗುತ್ತೆ ಹೇಳು, ನಾನೂ ಒಂದು ಹತ್ತು ಪೈಸೆ ಕೊಟ್ಟು ಕೊಂಡಕೋತೀನಿ'.

'ಅಯ್ಯೊ, ಶೇಷು, ಅದನ್ನ ಹುಡುಕಿಕೊಂಡು ಹೋದಲ್ಲೆಲ್ಲಾ- ಅಂಗಡಿ, ಮುಂಗಟ್ಟು, ಹೋಟೆಲು, ಷೇವಿಂಗ್ ಸೆಲೂನ್ ಎಲ್ಲೆಲ್ಲೂ ಸಿಗತ್ತೆ, ಮರಿ. ಅದನ್ನ ಗುರುತಿಸೋಕೆ ನಿನ್ನ ಒಳಗಣ್ಣು ತೆರದಿರಬೇಕಷ್ಟೆ.'

ಎಲಾ, ಇವನ ಸವಾಲು ಹಾಕೇಬಿಟ್ನಲ್ಲ. ನಾನೂ ಒಂದು ಕೈ ನೋಡೇ ಬಿಡ್ತೀನಿ. 'ಬಾರಯ್ಯ, ಸಂಪಿಗೆ ರಸ್ತೆ ಉದ್ದಕ್ಕೂ ಹೋಗೋಣ. ಅದೇನು ನೀತಿ ಕೊಡಿಸ್ತೀಯೋ ನೋಡೋಣ' ಅಂದೆ. ಇಬ್ಬರೂ ಹೊರಟೆವು.

ಅಲ್ಲೊಂದು ಬಟ್ಟೆ ಚಲುವೆ ಮಾಡುವ ಅಂಗಡಿ ಮುಂದೊಂದು ದೊಡ್ಡ ಬೋರ್ಡ್, ಅದರ ಮೇಲೆ 'Give today, take tomarrow' ಅಂತ ಬರೆದಿದೆ. 'ನೋಡಯ್ಯ, ಎಂಥಾ ಘನವಾದ ನೀತಿಪಾಠ' ಸೂರಿಯ ಉದ್ಗಾರ. 'ದಾನದ ಮಹಾತ್ಮೆಯ ಸಾರವಿದು'. ನಾನು ತಲೆದೂಗಿದೆ.

ಮುಂದೊಂದು ಜವಳಿ ಅಂಗಡಿ. ಬಾಗಿಲಲ್ಲಿ ದೊಡ್ಡದೊಂದು ಫಲಕ 'Buy six take one free' ಎಂದು ಸಾರುತ್ತಿತ್ತು. 'ಮೇಲ್ನೋಟಕ್ಕೆ ರಿಯಾಯಿತಿ ವ್ಯಾಪಾರದ ಸಂಕೇತ ಇದು' ಸೂರಿ ಪ್ರತಿಪಾದಿಸಿದ. 'ಮಹತ್ತರವಾದ ತತ್ವ ಅಡಗಿದೆ ಇಲ್ಲಿ. ಅರಿಷಡ್ವರ್ಗವಾದ ಆರನ್ನು ಕೊಳ್ಳುವ ಮೂಲಕ, ಅಂದರೆ ಒಟ್ಟು ರಾಶಿಯಿಂದ ಬೇರ್ಪಡಿಸು. ಆಗ ನಿರ್ದುಷ್ಟವಾದ ಆತ್ಮದ ಸಾಕ್ಷಾತ್ಕಾರವಾಗುತ್ತೆ. ಅದಕ್ಕೆ ಯಾವ ಬೆಲೆಯನ್ನೂ ತೆರಬೇಕಾಗಿಲ್ಲ. ಇದು ಇದರ ಗೂಢಾರ್ಥ' ಭಾವ ಪರವಶನಾದ ನನ್ನಿಂದ ಯಾವ ಸೊಲ್ಲೂ ಬರಲಾಗಲಿಲ್ಲ.

General Store ಒಂದು ಸಿಕ್ತು ಮನೇಲಿ ಹುಡುಗರಿಗೆಂದು ಒಂದು ಬಿಸ್ಕತ್ ಪ್ಯಾಕೆಟ್ ಕೊಂಡುಕೊಂಡೆ. ಅಂಗಡಿಯವನು ಇತ್ತ ಬಿಲ್ಲಿನ ತಳ ಅಂಚಿನಲ್ಲಿ ಈ ರೀತಿ ಅಚ್ಚುಮಾಡಿತ್ತು. Articles once taken out will not be takan back. ಇದನ್ನೆ ಗಮನಿಸಿದ ಸೂರಿ ಹೀಗೆಂದ: ನೋಡಯ್ಯ ಮಿತ್ರ, ನೀತಿ ಸಾಮ್ರಾಜ್ಯದ ನಿಯಮ ಎಷ್ಟು ಕಟ್ಟುನಿಟ್ಟು! ದೈವದತ್ತವಾದ ಅನೇಕಾನೇಕ ಒಲುಮೆಗಳ ಆಗರ ಈ ಮಾನವ. ತತ್ಸಂಬಂಧವಾದ ಕರ್ಮದಲ್ಲಿ ಇವನು

ತೊಡಗಿದಾಗ ಅದರ ಫಲ ಅಹಿತ ಎನಿಸಿದರೆ ನಂಗೆ ಬೇಡ ಅನ್ನೋಹಾಗಿಲ್ಲ, ಅನುಭವಿಸಲೇಬೇಕು. ಮಾಡಿದ್ದುಣ್ಣೋ ಮಹರಾಯ!

ಹೀಗೆ ಒಂದೆರಡು ಘಂಟೆಕಾಲ ದೀಕ್ಷೆ ಪಡೆದು ತಲೆದಿಮ್ಮೆನ್ನುತ್ತಿದ್ದ ನನಗೆ ಎದುರಿಗೊಂದು ಕಾಫಿ ಕ್ಲಬ್ ಕಂಡಾಗ ಮರುಭೂಮಿಯಲ್ಲಿ oasis ಕಂಡ್ಹಾಗಾಯಿತು. 'ಬಾರಯ್ಯ, ಒಂದು one-by-two ಹೀರೋಣ' ಎಂದೆ. ಒಳಗೆ ನುಗ್ಗಿ ಒಂದು ಮೇಜಿನ ಮುಂದೆ ಕೂತೆವು. ಮಾಣಿಗೆ ಕಾಯುತ್ತಾ, ಸುತ್ತಲೂ ಕಣ್ಣು ಹಾಯಿಸಿದೆವು. 'ನೀತಿಯ ಭಂಡಾರ ಇದು, ಶೇಷು' ಸೂರಿ ಪ್ರಾರಂಭಿಸಿದ. 'ಈ ಫಲಕ ನೋಡು' 'ಇವೊತ್ತು ನಗದು, ನಾಳೆ ಸಾಲ', ಅಂದರೆ ಇವೊತ್ತು ನಿನ್ನ ಕೈಲಿದೆ, ಒಳ್ಳೆಯ ಕೆಲಸ ಮಾಡು, ನಾಳೆ ಕನ್ನಡಿಗಂಟು, ಭೀಮನಿಗೆ ಎಚ್ಚರಿಕೆ ಕೊಡಲಿಲ್ಲವೆ ಅರ್ಜುನ ಹಾಗೆ'.

'ಮತ್ತೆ ಇದನ್ನು ಗಮನಿಸು 'ತಟ್ಟೆಯಲ್ಲಿ ಕೈ ತೊಳೆಯಬಾರದು' ಘನ ಸಂದೇಶ! ಉಂಡ ಮನೆಗೆ ಎರಡು ಬಗೆಯಬೇಡ, ಇದು ಇದರ ಅರ್ಥ. ಇಲ್ಲಿ ನೋಡು 'ಹೊರಗಿನ ತಿನಿಸಿಗೆ ಅವಕಾಶವಿಲ್ಲ'. ಆಹಾ, ಎಷ್ಟು ರಮ್ಯ! ಸ್ವಪ್ರಯತ್ನವೇ ನಿನ್ನ ಅಭ್ಯುದಯಕ್ಕೆ ಕಾರಣ, ತೆಂಗಿನ ಮರ ಹತ್ತುವವನಿಗೆ ಯಾರೂ ಕೈ ಕೊಡಲಾರರು' ಇದು ಇದರ ಸಾರಾಂಶ. ಅದೋ, ಮಾಣಿ ಬರುತ್ತಿದ್ದಾನೆ. ಏನು ಬೇಕೋ ಹೇಳ್ಬಿಡು.

ಹೊರಗೆ ಬಂದಾಗ ಗಂಟೆ ಒಂದಕ್ಕೆ ಹತ್ತು ನಿಮಿಷವಿತ್ತು. ಹತ್ತಿರದ ದಾರಿ ಅಂತ ಪಕ್ಕದ ಅಡ್ಡ ರಸ್ತೆಗೆ ಇಳಿದೆವು. ಅಲ್ಲೊಂದು ಪುಟ್ಟ ರೊಟ್ಟಿ ಅಂಗಡಿ. SAI BAKERY ಎಂಬ ಹೆಸರು ಹೊತ್ತು ರಾರಾಜಿಸುತ್ತದೆ. ಕ್ಷಣಕಾಲ ಸ್ತಬ್ಧನಾಗಿ ನಿಂತ ಸೂರಿ ಗಂಭೀರವದನನಾಗಿ ಹೀಗೆಂದು ನುಡಿದ: 'ನೋಡಿದೆಯಾ, ಶೇಷು, ಹೇಗೆ ಅಧಿಕಾರವಾಣಿಯಲ್ಲಿ ಹುಲು ಮಾನವನ ಅಂತ್ಯಗುರಿಯನ್ನು ಸಾರುತ್ತಿದೆ ಈ ಫಲಕ? ದಯಾದಾಕ್ಷಿಣ್ಯವಿಲ್ಲದೆ 'ಸಾಯ್ಬೇಕರಿ' ಎಂಬ ಸಾಮೂಹಿಕ ಎಚ್ಚರಿಕೆ ನೀಡುತ್ತಿದೆ. ಇಂದಿನ ನಮ್ಮ ನೀತಿ ಅನ್ವೇಷಣೆಯ ಪರಾಕಾಷ್ಠೆ ಅನಿಸುವುದಿಲ್ಲವೆ ನಿನಗೆ?

ನನ್ನ ಮೌನವನ್ನು ಒಪ್ಪಿಗೆಯೆಂದೇ ಭಾವಿಸಿರಬೇಕು ಅವನು.

---

## ಪ್ರಶ್ನೆ

ಮಗಳಿಗೆ ಮದುವೆ ಆಯಿತೆ?
ಎಷ್ಟು ಕೊಟ್ಟಿರಿ ವರದಕ್ಷಿಣೆ?
ಮಗನಿಗೆ ಕೆಲಸ ಸಿಕ್ಕಿತೆ?
ಎಷ್ಟು ಕೊಟ್ಟಿರಿ
ಸರಿ
ವರ ದಕ್ಷಿಣೆ?

–ಎಚ್. ಡುಂಡಿರಾಜ್

# ಬಂತು ಯುಗಾದಿ!

ಶಾಂತಾ ರಘು

"ತರಕಾರಿ, ಬೆಲ್ಲ, ಗಸಗಸೆ, ಕಡ್ಲೇಬೇಳೆ, ಉದ್ದಿನಬೇಳೆ, ತುಪ್ಪ, ಯಾಲಕ್ಕಿ, ಕಾಯಿ, ಹೂವು, ಹಣ್ಣು---- ಲೇ! ಲೇ! ವಿಜೀ! ಏನೇ ಇದು? ಲಿಸ್ಟು ಮುಗಿಯೋ ಹಾಗೇ ಇಲ್ವೇ? ಇದನ್ನೆಲ್ಲಾ ತರೋಕೆ ನೀವು ನೀವೇ ಹೆಂಗಸ್ರು ಹೋಗ್ಬಾರ್ದೆ? ನನ್ನನ್ಯಾಕೆ ಎಳೀತೀಯಾ?" ಅಂದ ಶಂಕರ ಗಂಟ್ಲು ದೊಡ್ಡದು ಮಾಡಿ.

ವಿಜಯ ಅಡಿಗೆ ಮನೆಯಿಂದ ಹೊರಗ್ಬಂದ್ಲು. "ನಾಡಿದ್ದು ಯುಗಾದಿ. ವರ್ಷಾವಧಿ ಹಬ್ಬ. ಸ್ವಲ್ಪವಾದ್ರೂ ಹೆಚ್ಚುವರಿ ಮಾಡ್ಬೇಡ್ವೆ? ಈ ಸಾಮಾನೆಲ್ಲಾ ಹೊತ್ಕೊಂಡು ಹ್ಯಾಗ್ರೀ ಬರೋದು ನಾವು?"

ಅಲ್ಲೇ ಹೂಬತ್ತಿ ಹೊಸೀತಾ ಕೂತಿದ್ದ ವೇದಮ್ಮ "ಹೂಂ ಕಣೋ ಶಂಕ್ರೂ! ನಾಳೆ ನಿನ್ತಂಗೀ ಬೇರೆ ಬರ್ತಾಯಿದಾಳೆ, ಗಂಡ ಮಕ್ಳ ಜತೆ. ಐದ್ವರ್ಷ ಆಯ್ತು ಅವ್ರು ಇಂಡಿಯಾಗೆ ಬಂದು. ಈ ಸಲ ಹಬ್ಬಕ್ಕೆ ಎಲ್ರೂ ಸೇರಿದೀವಿ. ಹಳೇ ಕಾಲದ ತರಾ ಹಬ್ಬ ಹರಿದಿನಗಳನ್ನು ಅಷ್ಟು ಸಂಭ್ರಮದಿಂದ ಆಚರಿಸ್ದೇ ಹೋದ್ರೂ, ಏನೋ ಇದ್ದದ್ರಲ್ಲಿ...."

"ಸರಿ, ಸರಿ! ನಡ್ಯೇ ವಿಜೀ! ಇಷ್ಟೊಂದು ಸಾಮಾನು ತರೋಕೆ ಬ್ಯಾಗುಗಳಾದ್ರೂ ಇದ್ಯೇ ನಮ್ಮನೇಲಿ?"

"ಅಯ್ಯೋ ರಾಮ! ಈಗಿನ ಪೇಟೆಧಾರಣೆ ವಿಷ್ಯ ಏನಾದ್ರೂ ತಿಳಿದಿದ್ರೆ ತಾನೆ ನಿಮ್ಗೆ? ಸಾಮಾನುಗಳಿಗ್ಯಾಕೆ ದೊಡ್ಡ ಬ್ಯಾಗು? ಈಗೆಲ್ಲಾ ದೊಡ್ಡ ಬ್ಯಾಗು ದುಡ್ಡಿಗೆ, ಮಿನಿ ಬ್ಯಾಗು ಸಾಮಾನಿಗೆ!" ವಿಜಿ ನಿಟ್ಟುಸಿರಿಟ್ಲು.

"ಅಮ್ಮಾ!" ಅಂತ ಓಡ್ತಾ ಬಂದ ಮಗ ವಿವೇಕ್. ಹದಿಮೂರು ವರ್ಷ. ಎಂದಿನಂತೆ ಕೈಯಲ್ಲಿ ಕ್ರಿಕೆಟ್ ಬ್ಯಾಟು. ಹುಟ್ಟೋವಾಗ್ಲೇ ಅವನ ಕೈಯಲ್ಲಿ ಕ್ರಿಕೆಟ್ ಬ್ಯಾಟು ಬೆಳೆದಿತ್ತು ಅಂತಾರೆ ಅವನಜ್ಜಿ! "ಅಮ್ಮಾ! ನಾಡಿದ್ದು ರಜೆ. ಇಂಟರ್ ಸ್ಕೂಲ್ ಮ್ಯಾಚಿದೆ. ಬೇಗ ಹೋಗ್ಬೇಕು!"

"ಏನೋ ಅದು ಹಬ್ಬದ್ ದಿನಾನೂ ನಿನ್ನ ಕ್ರಿಕೆಟ್ಟು? ಎಲ್ಲಾ ಮೂಟೆ ಕಟ್ಬಿಟ್ಟು, ಲಕ್ಷಣವಾಗಿ ಎಣ್ಣೆ ನೀರು ಹಾಕ್ಕೊ. ಯಾವಾಗ್ಲೂ ತಿರುಗೋದೇ ಆಯ್ತು!" ಅಂದ್ರು ಅಜ್ಜಿ. ಹಳೇ ಕಾಲದೋರು ಪಾಪ!

"ಅಜ್ಜೀ! ರಜಾ ದಿನ ಆಡ್ದೆ ಇನ್ಯಾವಾಗ ಆಡೋದು? ಎಣ್ಣೇ ನೀರು ಹಾಕ್ಕೊಂಡ್ರೆ ನಂಗೆ ಸಿಕ್ಕಾಪಟ್ಟೆ ಸೀನು ಬರತ್ತೆ! ನೀನು ಸುಮ್ನೆ ಹೋಳಿಗೆ, ಚಿತ್ರಾನ್ನ ಎಲ್ಲಾ ಮಾಡಿಟ್ಟಿರು. ನಾನು ಆಡ್ಬಿಟ್ಟು ಬಂದು ತಿಂತೀನಿ!"

"ನಿಂಗೆ ಸರ್ಯಾಗಿ ಹೆಸರಿಟ್ಟಿದಾರೆ! ವಿವೇಕ ಹೊಟ್ಟೆ ಬಾಕ ಅಂತ! ಆಡೋದು, ತಿನ್ನೋದು-- ಬಾರ್ಬರಾ ಕಾರ್ಟ್‌ಲ್ಯಾಂಡ್ ಪುಸ್ತಕ ಓದ್ಕೊಂಡು ಬಂದ ಅವನಕ್ಕ ವಿನಯಾ, ದೊಪ್ಪನೆ ಸೋಫಾದ ಮೇಲೆ ಕೂತ್ಲು. ಹದಿನೇಳು ವರ್ಷ.

"ಷಟಪ್ ವಿನ್ನಿ! ನನ್ ತಂಟೇಗೆ ಬರ್ಬೇಡ! ಸಿಲ್ಲಿ girls! ಯಾವಾಗ್ಲೂ ಲವ್ವಿ ಡವ್ವಿ ರೋಮಾನ್ಸ್‌ಗಳು ಓದ್ಕೊಂಡು!"

"ಹೋಗೋ ಆಚೆ!---ವಿನಯಾ! ಹೇಳಿ ಕೇಳಿ ಹೆಣ್ಣು ಹುಡ್ಗಿ ನೀನು. ಆಚೆ ಈಚೆ ಓಡ್ತೆ-ನಾಡದ್ದು ಎರ್ಕೊಂಡು, ಅಮ್ಮಂಗೆ ಹೆಲ್ಪ್ ಮಾಡು. ಒಂದಳೆ ರಂಗೋಲಿ ಎಳ್ಯೋಕೂ ಬರೊಲ್ವಲ್ಲೆ? ನಾಳೆ ಮದ್ವೆ ಆಗೋ ಹುಡ್ಗಿ!"

"ಅಜ್ಜೀ! ಪ್ಲೀಸ್! ಮದ್ವೇಗೂ ರಂಗೋಲಿಗೂ ಏನ್ ಸಂಬಂಧ. ಎಣ್ಣೆ ನೀರು ನಂಗೆ ಅಲರ್ಜಿ! ಟಿಯಾರಾ ಷಾಂಪೂನೇ ನಾನು ಯೂಸ್ ಮಾಡೋದು. ನಾಡಿದ್ದು ನಾನೂ ನನ್ನ ಫ್ರೆಂಡ್ಸೂ ಮ್ಯಟಿನೀ ಪ್ರೋಗ್ರಾಂ ಹಾಕಿದೀವಿ."ವಿನಯಾ ಆಕಳಿಸಿದ್ಲು.

"ಈಗಿನ ಕಾಲದ ಹುಡುಗ್ರಿಗೆ ಏನೂ ಬೇಡ! ಯಾವುದ್ರಲ್ಲೂ ನಂಬಿಕೇನೂ ಇಲ್ಲ, ಶ್ರದ್ಧೇನೂ ಇಲ್ಲ. ನಂ ಕಾಲದಲ್ಲಿ ಯುಗಾದಿ ಬಂತೂಂದ್ರೆ, ಅದೇನು ಆಸೆ, ಉತ್ಸಾಹ, ಸಂಭ್ರಮ, ಏರ್ಪಾಡು--- ವೇದಮ್ಮ ನಿಟ್ಟುಸಿರಿಟ್ರು.

ಈಸಿಛೇರಲ್ಲಿ ಪೇಪರೋದುತ್ತಾ ಕೂತಿದ್ದ ರಂಗರಾಯ್ರು, ಕನ್ನಡಕ ಕೆಳಗಿಳಿಸಿದ್ರು. "ವೇದಾ! ಕಾಲ ಬದಲಾಯ್ತು ಕಣೆ. ನಮ್ಕಾಲದಲ್ಲಿ ನಾವಿದ್ದ ಹಾಗೆ, ಈಗಿನ ಕಾಲದ ಹುಡುಗ್ರು ಇರೋಲ್ಲ. ಈಗೇನಾಯ್ತು? ನೀನು ಬೇಕಾದ್ರೆ ಅರ್ಧ ಪಾವೆಣ್ಣೇಲಿ ಎರ್ಕೊಂಡು, ಊರಗಲ ರಂಗೋಲಿ ಹಾಕು- ಯಾರು ಬೇಡಾಂತಾರೆ?" ಅಂತ ಮತ್ತೆ ಪೇಪರೊಳಗೆ ಸೇರ್ಕೊಂಡ್ರು.

ಮಾರನೇ ದಿನ ನ್ಯೂಯಾರ್ಕ್‌ನಿಂದ ಮಗಳು, ಅಳಿಯ, ಮೊಮ್ಮಕ್ಕಳು, ಚೇತನ್, ಪ್ರಿಯಾ, ಎಲ್ರೂ ಬಂದು, ಮನೇಲಿ ಗದ್ದಲವೋ ಗದ್ದಲ. ಪ್ರಿಯಾಗೆ ಹನ್ನೆರಡು ವರ್ಷ, ಚೇತನ್‌ಗೆ ಎಂಟು. ಅವರಪ್ಪಂಗೆ ನ್ಯೂಯಾರ್ಕ್‌ನಲ್ಲಿ ಯಾವುದೋ LICಯಲ್ಲಿ ಕೆಲಸ. ಹಾಯಾಗಿ ಅಲ್ಲೇ ನೆಲಸ್ಬಿಟ್ಟಿದ್ರು.

ಐದು ವರ್ಷ ಆದ್ಮೇಲೆ ಇಂಡಿಯಾಗೆ ಬಂದಿರೋ ಮಕ್ಕಳಿಗೆ ಎಲ್ಲಾ ಹೊಸದು, ಆಶ್ಚರ್ಯ. ಆಯುಸ್ಸೆಲ್ಲಾ ಪರದೇಶದಲ್ಲೇ ಕಳೆದಿದ್ರೂ- ಅಜ್ಜಿ, ಅತ್ತೆ, ಮಾಡಿದ ಅಡಿಗೇನ, ಒಂಚೂರೂ fuss ಮಾಡ್ದೆ- "ಖಾರಾ! ಹುಳೀ!"ಅಂತ ಲೊಟ್ಟೆ ಲೊಸುಕು ಹೇಳ್ದೆ ತಿಂದ್ರು. ನೂರಾರು ಪ್ರಶ್ನೆಗಳು. "Grandpa! ನಾಳೆ ಯುಗಾದಿ festival ಅಂತಾಯಿದೀರಲ್ಲ! ಏನಜ್ಜ festival ಅದು?" ಅಂದ ಚೇತನ್ ತಾತನ ತೊಡೆಯೇರಿ.

ವೇದಮ್ಮ ಅಲ್ಲೇ ಕೂತು, ಅಮೆರಿಕಾದಲ್ಲಿದ್ರೂ ಉದ್ದಾನೆ ಕೂದಲು ಬೆಳೆಸಿದ್ದ ಪ್ರಿಯಾಗೆ ತಲೆ ಬಾಚ್ತಾಯಿದ್ರು. "ಯಾಕೋ ಚೇತೂ? ನಿಮ್ಮಮ್ಮ ಯುಗಾದಿ ಮಾಡ್ತಾಯಿರ್ಲಿಲ್ವೆ ನಿಮ್ಮೂರಲ್ಲಿ?"

"Oh Grandma! ಅಮ್ಮ ಏನೋ ಸ್ವೀಟ್ ಮಾಡ್ತಾಳೆ. ಆದ್ರೆ ಇಲ್ಲಿ ನೀವೆಲ್ಲಾ ಎಷ್ಟು grand ಆಗಿ ಮಾಡ್ತೀರಿ! Tell me, grandpa, ಯುಗಾದಿ ಯಾಕೆ ಇಷ್ಟು ದೊಡ festival?" ಪ್ರಿಯಾ ಆಸೆಯಿಂದ ಕೇಳಿದ್ಲು.

ರಾಯರಿಗೋ ಆನಂದ. ಇಷ್ಟರ ಮಟ್ಟಿಗೆ ಮಗು ಕೇಳತ್ತಲ್ಲಾಂತ.

"ಪ್ರಿಯಾ! ಹಬ್ಬಗಳನ್ನ ಮಾಡೋದ್ರಿಂದ ಹೊಸಾ ಹುಮ್ಮಸ್ಸು ಬರತ್ತೆ. ಉತ್ಸಾಹ ಚಿಗರತ್ತೆ. ಪ್ರತಿ ದಿನದ ಡೇಲಿ ರೊಟೀನಿಂದ ಒಂದು ಬದಲಾವಣೆ ಇರತ್ತೆ. ಹಬ್ಬಗಳು ನಮ್ಮ ಹಿಂದೂ ಸಂಸ್ಕೃತಿಯ ಮುಖ್ಯ ಭಾಗ. ಯುಗಾದಿ ಅಂದ್ರೇನು ಗೊತ್ತೆ?"

"ಏನು Grand pa?"

"New Year ಅಂತ. ಅವತ್ತೆ ನಮಗೆ ಹೊಸ ವರ್ಷ ಹುಟ್ಟತ್ತೆ"

"ಅಂದ್ರೆ ಜನವರಿ 1st ತರಾನಾ?"

"ಹೂಂ! ಆದ್ರೆ ನಮ್ಮ ಹಿಂದೂ ಹೊಸ ವರ್ಷ ಚೈತ್ರ ಮಾಸದ ಮೊದಲ ದಿನ ಶುರುವಾಗುತ್ತೆ" "ಚೈತ್ರ ಅಂದ್ರೆ?"

"ಅಂದ್ರೆ, ಇಂಗ್ಲೀಷ್ ಜನವರಿ, ಫೆಬ್ರವರಿ ತರಾ, ಕನ್ನಡದಲ್ಲಿ ಚೈತ್ರ, ವೈಶಾಖ, ಜೇಷ್ಠ, ಶ್ರಾವಣ, ಹೀಗೆ ಹನ್ನೆರಡು ಮಾಸಗಳಿವೆ. ಚೈತ್ರಮಾಸ ಈ ವರ್ಷ ಏಪ್ರಿಲ್ ನಾಲ್ಕರಂದು ಶುರುವಾಗ್ತಾಯಿದೆ. ಹಾಗೇ, ಹಿಂದೂ ವರ್ಷಗಳು ಅರವತ್ತು ಇವೆ– ಗೊತ್ತೆ?" "ಅಬ್ಬ! ಅರವತ್ತೆ"

"ಹೂಂ! ಪ್ರಭವ, ವಿಭವ, ಶುಕ್ಲ, ಹೀಗೆ. ಈ ವರ್ಷದ ಹೆಸ್ರು ಪ್ರಜೋತ್ಪತ್ತಿ. ನಾಳೆ ಶುರುವಾಗೋ ಹೊಸವರ್ಷ ಅಂಗೀರಸ ವರ್ಷ"

ಚೇತನ್‌ಗೆ ಕತೆ ಅಂದ್ರೆ ಪಂಚಪ್ರಾಣ. "Grandpa! ಅದೇನು ಅರವತ್ತು ವರ್ಷ? ಯಾಕೆ ಅರವತ್ತು?"

"ಸರಿ! ತಾತನ ಪಾಡು ಖುಷಿ! ಅಡುಗೂಲಜ್ಜಿ ಕಥೆ ಎಲ್ಲಾ ಶುರುಮಾಡ್ತಾರೀಗ!" ವಿವೇಕ ಛೇಡಿಸಿದ.

"ಸುಮ್ನಿರೋ! ಇಂಡಿಯಾಲಿರೋ ನಿಂಗಿಲ್ಲ ಇಂಟರೆಸ್ಟು! ಅವರಿಗಾದ್ರೂ ಇದ್ಯಲ್ಲ! ಚೇತೂ! ಹೇಳ್ತೀನಿ ಕೇಳು! ನಾರದನ ಹೆಸ್ರು ಕೇಳಿದೀಯಾ ನೀನು?"

"ಓ! The best or the worst mischief monger in our mythology!" ಯಥಾ ಪ್ರಕಾರ ಬಾರ್ಬರಾ ಕಾರ್ಟ್‌ಲ್ಯಾಂಡ್ ಓದಿಸ್ತಾಯಿದ್ದ ವಿನಯಾ ಉವಾಚ.

"ಕರೆಕ್ಟ್! ಹೀಗೇ ಬ್ಯಾಚಲರ್ ಆಗಿ ಕೀಟಲೆ ಮಾಡ್ತಾ ತಿರಗ್ತಾಯಿದ್ದ ನಾರದರಿಗೆ– One fine day ಹೆಂಡ್ತಿ ಆಸೆ ಬಂದ್ಬಿಡ್ತು! ಕೃಷ್ಣನ ಹದಿನಾರು ಸಾವಿರ ಹೆಂಡ್ತೀರಲ್ಲಿ, ಒಬ್ಬಾಕೇನ borrow ಮಾಡ್ಕೊಳ್ಳಾಣಾಂತ ತುಂಬಾ ಟ್ರೈ ಮಾಡ್ದ

ಪಾಪ. ಆಗ್ಲಿಲ್ಲ! ಸುಸ್ತಾಗಿ ಯಮುನಾ ನದೀಲಿ ಸ್ನಾನ ಮಾಡ್ದ. ನಾರದ, ನಾರದಿ ಆಗ್ಬಿಟ್ಟ! ಲೇದಿ ಆಗ್ಬಿಟ್ಟ! ತಕ್ಷಣ ಒಬ್ಬ ಋಷಿ ಕಣ್ಣಿಗೆ ಬಿದ್ದ. ಅಷ್ಟೆ! ಯಥಾ ಪ್ರಕಾರ ಋಷಿ ನಾರದೀ ಜತೆ ಸಂಸಾರ ಹೂಡ್ಬಿಟ್ಟ! ಅಯ್ಯೋ ಪಾಪ! ನಂ ನಾರದೀಗೆ ಅರವತ್ತು ವರ್ಷಗಳಲ್ಲಿ ಅರವತ್ತು ಮಕ್ಕಳಾಗಿಬಿಟ್ವು! ಆ ಅರವತ್ತು ಮಕ್ಕಳ ಹೆಸರುಗಳೇ– ಪ್ರಭವ, ವಿಭವ, ಶುಕ್ಲ– ಹೀಗೆ. ಸಿಕ್ಕಾಪಟ್ಟೆ ಮಕ್ಕಳನ್ನ ಹೆತ್ತೂ, ಸುಸ್ತಾಗಿ, ನಾರದಿ ಲಭೋ ಲಭೋ ಬಡಕೊಂಡ್ಲು ವಿಷ್ಣು ಹತ್ರ. ಆ ಋಷೀನೇ ವಿಷ್ಣು ಅನ್ನಿ. ನಾರದೀನ ಮತ್ತೆ ನಾರದನಾಗಿ ಮಾಡ್ದ---

"Yech! ಏನ್ ಕತೆ ತಾತಾ! ನಂಬೋ ಹಾಗಿದ್ಯೆ? ನಮ್ಮ mythology ಎಲ್ಲ ಬರೀ nonsense ಉ!" ಅಂದ್ಲು ವಿನಯಾ ಒಂದು ಕಿವೀನ ಈ ಕಡೇನೇ ಇಟ್ಕೊಂಡು!

"ಸುಮ್ನಿರೇ ವಿನೂ! ನೀನು ಯಾವ ದೃಷ್ಟಿಯಿಂದ ನೋಡ್ತೀಯಾ ಅನ್ನೋದರ ಮೇಲೆ ಹೋಗತ್ತೆ! ಎಲ್ಲಾನೂ literal ಆಗಿ ತೊಗೋಬಾರ್ದು. ನಮ್ಮ ಪುರಾಣ ಕತೆಗಳಿಗೆಲ್ಲ ಒಂದು inner meaning, moral ಇದ್ದೇ ಇರತ್ತೆ."

"ಅಣ್ಣಾ! ಈ ಕತೇಲಿ ಏನು moral ಇದ್ಯೋ ನಾಕಾಣೆ! ನಮ್ಮ Family Planning Programme ಗೆ ಸಕತ್ blow– ಹೀಗೆ ಅರವತ್ತು ಮಕ್ಳನ್ನ ಹೆರೋದು!" ಪಕ್ಕದಲ್ಲಿದ್ದ ಶಂಕರ, ಮಕ್ಕಳ ಜತೆ ಸೇರ್ಕೊಂಡು, ತಾನೂ ಒಂದು ಜೋಕು ಬಿಟ್ಟ.

"ಶಂಕ್ರೂ! ನೀನೂ ಸರ್ರ್ಯಾಗಿದೀಯಾ ಕಣೋ! ಚೇತೂ, ಪ್ರಿಯಾ! ಯುಗಾದಿ ಅಂದ್ರೆ– ಯುಗದ, ವರ್ಷದ–ಆದಿ, ಆರಂಭ ಅಂತ ಅರ್ಥ! ಆದಿನ ನಾವು ಮುಖ್ಯವಾಗಿ ತಿನ್ನಲೇ ಬೇಕಾದ್ದು– ಬೇವು, ಬೆಲ್ಲ, Neem and Jaggery"

"ಬೆಲ್ಲ ನಂಗಿಷ್ಟ! ಆದ್ರೆ neem ಬರೀ ಕಹಿ ಅಲ್ವೆ grand pa? ಅದನ್ಯಾಕೆ ತಿನ್ಬೇಕು?" ಅಮೆರಿಕದ ಮೊಮ್ಮಕ್ಕಳಿಗೆ ವಿಪರೀತ ಇಂಟರೆಸ್ಟು!

"ಅದರರ್ಥ ತುಂಬ ಚೆನ್ನಾಗಿದೆ! ಬೆಲ್ಲ ಸಿಹಿ, ಬೇವು ಕಹಿ. ಲೈಫೂ ಅಷ್ಟೆ ಸುಖ, ದುಃಖ ಎಲ್ಲ ಬರತ್ತೆ. ಹಗಲು, ರಾತ್ರಿ ಬರೊಲ್ವೆ? ಹಾಗೆ! ಸುಖ ಬಂದಾಗ ಹಿಗ್ಗಬಾರ್ದು, ದುಃಖ ಬಂದಾಗ ಕುಗ್ಗಬಾರ್ದು. ಎರಡನ್ನೂ ಸಮಾನವಾಗಿ ತೊಗೋಬೇಕು. ರಾತ್ರಿ ಆದ್ಮೇಲೆ ಹಗಲು ಬಂದೇ ಬರತ್ತೆ, ಅಲ್ವೆ? ಹಾಗೇ ದುಃಖಾನ ಧೈರ್ಯವಾಗಿ ಎದುರಿಸಿದ್ರೆ, ಆಮೇಲೆ ಸುಖ ಬಂದೇ ಬರತ್ತೆ. ಹಾಗೇ ಬೇವು ತಿನ್ನೋವಾಗ ಕಹಿಯಾದ್ರೂ– ಅದ್ರಿಂದ ಆರೋಗ್ಯಕ್ಕೆ ತುಂಬ ಒಳ್ಳೇದು"

"ಹಿಂದೂ ಲಿ ನಾನೂ ಓದ್ದೆ ತಾತಾ. ಅಮೆರಿಕನ್ ಸೈಂಟಿಸ್ಟುಗಳು, ಬೇವಿನ ಮರಕ್ಕೆ– Wonder plant ಅಂತ ಹೆಸ್ರಿಟ್ಟಿದಾರಂತೆ. ಬೇವಿನ ಉಪಯೋಗಗಳು ಲೆಕ್ಕವಿಲ್ಲದಷ್ಟು– ಮೈ ಕೈ ನೋವಿಗೆ, ಜೀರಣ ಶಕ್ತಿಗೆ, pest controlಗೆ, ಗೊಬ್ಬರಕ್ಕೆ, ಹಲ್ಲಿನ ಆರೋಗ್ಯಕ್ಕೆ--- ಅಂದ್ಲು ವಿನಯಾ.

''ಹೋಗ್ಲಿ ಒಪ್ಕೊತೀಯಲ್ಲ! ಅದನ್ನೇ ಈ ಶ್ಲೋಕದಲ್ಲಿ ಹೇಳ್ತಾರೆ- ''ಶತಾಯುರ್ವಜ್ರದೇಹಾಯ- ಸರ್ವಸಂಪತ್ಕರಾಯ ಚ- ಸರ್ವಾರಿಷ್ಟ ವಿನಾಶಾಯ- ನಿಂಬಕಂ ದಳ ಭಕ್ಷಣಂ'' ಬೇವಿನ ಸೊಪ್ಪು ತಿನ್ನೋದ್ರಿಂದ ನೂರು ವರ್ಷ ಆಯಸ್ಸು. ದೇಹ ವಜ್ರಕಾಯವಾಗಿರುತ್ತೆ. ಎಲ್ಲ ರೋಗಗಳೂ ನಾಶವಾಗುತ್ತೆ.''

''So Nice Grandpa! ನಂಗಿದೆಲ್ಲಾ ಗೊತ್ತಿರಲೇ ಇಲ್ಲ!'' ಅಂದ್ಲು ಪ್ರಿಯಾ. ''ಹ್ಯಾಗೆ ಗೊತ್ತಾಗತ್ತೆ? ನಿಮ್ಮಪ್ಪ, ಅಮ್ಮ ಹೇಳಿದ್ರೆ ತಾನೆ?'' ವೇದಮ್ಮ.

''ಹೂಂ! ಬೇವೂ ಬೆಲ್ಲ ನಾನೂ ತಿಂತೀನಿ ಯುಗಾದಿ ದಿನ'' ಅಂದ ವಿವೇಕ್.

''ಆಹಾ! ತಿಂತೀಯಾ! ಬೇವಿನ ಎಲೆ ಎಲ್ಲಾ ಹೆಕ್ಕಿ ಎಸಿದ್ಬಿಟ್ಟು, ಬರೀ ಬೆಲ್ಲ ಮುಕ್ತೀಯಾ! ನಾಕಾಣೆನೇ?'' ಮೊಮ್ಮಗನ್ನ ಮೂದಲಿಸಿದ್ರು ಅಜ್ಜಿ.

''ಅದ್ರಿಂದೇನೇ ವೇದಾ? 'ಬೆಲ್ಲ ಮುಂದು ಮಾಡಿ ಬೇವ ಮೆಲ್ಲಿರಣ್ಣ' ಅಂತ ಕವಿ ಹೇಳಿದಾನೆ. ದುಃಖಾನ, ಸುಖಾನೇ ಕಡೆಗೆ ಗೆಲ್ಲುತ್ತೆ ಅಂತ ನಂಬಿಕೆ''

''ಪ್ರಿಯಾ, ಚೇತನ್, ಯುಗಾದಿ ದಿನ ತಿನ್ನೋದು ಇಷ್ಟೇ ಅಲ್ಲ. ಬಿಸಿಬಿಸಿ ಬೇಳೆ ಹೂರಣದ ಒಬ್ಬಟ್ಟು, ಪಾಯಸ, ಆಂಬೊಡೆ, ಚಿತ್ರಾನ್ನ, ಕೋಸಂಬ್ರಿ, ಹಪ್ಪಳ---

''ವಾವ್! Grandma ಇಷ್ಟೊಂದಾ? ನಂಗಿದೆಲ್ಲಾ ಇಷ್ಟ! ನಾಳೆ ಬೇಗ ಊಟ ಮಾಡೋಣ್ವಾ?'' ಅಂದ ಚೇತನ್ ಬಲು excited ಆಗಿ.

''ಇನ್ನೊಬ್ಬ ಹೊಟ್ಟೆಬಾಕ ನೀನು! ಅಲ್ಲಾ ತಾತ, ಬೆಲೆಗಳೆಲ್ಲಾ ಆಕಾಶಕ್ಕೇರಿವೆ, ಹಾಗೇ, ಹೀಗೇಂತ ಕೂಕ್ಕೋತಾನೇ ಇರ್ತೀರಲ್ಲ! ಈ ತರಾ ಪಂಚಭಕ್ಷ್ಯಪರಮಾನ್ನ ಮಾಡಿ ತಿನ್ನದಿದ್ರೆ ಏನೀಗ?'' ವಿನಯಾಗೆ ಏನನ್ನಾದ್ರು contradict ಮಾಡ್ತಾನೇ ಇರ್ಬೇಕು!

''ವಿನೂ! ದಿನದಿನ ತಾಪತ್ರಯ ಇದ್ದೇ ಇದೆ ಎಲ್ರಿಗೂ. ಎಲ್ಲಾನೂ ಸ್ವಲ್ಪ ಮರೆತು, ಎಲ್ಲೂ ಕೂಡಿ, ಹಬ್ಬ ಮಾಡಿ, ಬಗೆ ಬಗೆಯ ಭಕ್ಷ್ಯಗಳನ್ನು ತಿಂದು ನಲಿಯೋಣ ಅಂತ ಹಿರಿಯರು ಮಾಡಿಟ್ಟಿದಾರೆ. ಒಂದು diversion ಅಂತ ಇಟ್ಕೊ''

''ಹೂಂ ಕಣೇ ವಿನೂ! ಯುಗಾದಿ ಕೊಂಡಾಡ್ದೇ ಇರೋರು ಯಾರು? ನಮ್ಮ ಯುಗಾದಿ ಆಗಿ 15 ದಿನಕ್ಕೆ ತಮಿಳುನಾಡು, ಕೇರಳ ಮತ್ತು ಪಂಜಾಬ್‌ನವರು ಯುಗಾದಿ ಆಚರಿಸ್ತಾರೆ. ತಮಿಳು ಯುಗಾದಿಗೆ ಚಿತ್ರವಿಷು ಅಂತಾರೆ. ಕೇರಳ ಯುಗಾದಿಯ ಮುಖ್ಯ ತಿಂಡಿ ಚಕ್ಕಪ್ರಥಮನ್. ಹಲಸಿನ ತೊಳೆ, ಹಾಲು, ಬೆಲ್ಲ ಸೇರಿಸಿ ಮಾಡ್ತಾರೆ. ಆಹಾ! ಹ್ಯಾಗಿರುತ್ತೇಂತೀಯಾ? ವೇದಮ್ಮ ಅಡಿಗೆ information ಎಲ್ಲಾ collect ಮಾಡಿಟ್ಟುಕೊಂಡಿದ್ರು!

''ಯಾವ್ರೂರಾದ್ರೇನು? ಯುಗಾದಿ ಅಂದ್ರೆ ಬೇವಿನ ಮಾವಿನ ತೋರಣ, ಹೊಸ ಬಟ್ಟೆ, ಮನೆಗೆ ಸುಣ್ಣ ಬಣ್ಣ, ಬಗೆ ಬಗೆಯ ರಂಗೋಲಿ, ಎಲ್ಲಾ ಕಡೆ ಸಂಭ್ರಮವೇ!

'ಯುಗಯುಗವು ಕಳೆದರೂ ಯುಗಾದಿ ಮರಳಿ ಬರುತಿದೆ' ಅಂತ ಕೇಳಿಲ್ವೆ?'' ಅಂದ್ರು ರಾಯ್ರು.

"ಯುಗಾದಿಯ ಇನ್ನೊಂದು ಮಹತ್ವ ಮರೆತುಬಿಟ್ಯಲ್ಲ ಅಣ್ಣಾ! ಬಾಂಬೆ ಡೈಯಿಂಗ್‌ನಲ್ಲಿ ಯುಗಾದಿಗೆ ಬೆಡ್‌ಶೀಟ್ ಸೇಲ್, ಪ್ರಿಯದರ್ಶಿನೀಲಿ ಯುಗಾದಿಗೆ ಸೀರೆ ಸೇಲ್, ಅಂತ ಎರಡು ವಾರದಿಂದ ನಿನ್ ಸೊಸೆ ಓಡಾಡ್ತಾನೇಯಿದಾಳಲ್ಲ. ಯುಗಾದಿ ಮಹತ್ವದಿಂದ ನನ್ನ ಪರ್ಸ್ ಬಡಕಲಾಯ್ತು!'' ಅಂತ ಒಂದು parting shot ಕೊಟ್ಟು ಶಂಕರ ಎದ್ದು ಹೋದ.



"ರೈಲು ರೋಕೋ ಮಾಡ್ತಿದಾರಂತೆ, ನಿಧಾನವಾಗಿ ಗುಡಿಸು ಪರವಾಗಿಲ್ಲ!"

# ಸವಿ ಗನ್ನಡ ಪಾಠಮಾಲೆ

ಲೀಲಾ ಮಿರ್ಲೆ

ನಾನು ಶಾಲೆಯೊಂದರಲ್ಲಿ ಕನ್ನಡದ ಉಪಾಧ್ಯಾಯಿನಿ. ಸಣ್ಣ ತರಗತಿಗಳಿಗೆ ಪಾಠ ಕಲಿಸುವಾಗ ಪುನಃ ಪುನಃ ಬಾಲಬೋಧೆಯ ಕನಕ, ಕಮಲ, ಬಸವರ ಪಾಠ ಹೇಳಿ ಹೇಳಿ ಬೇಜಾರಾಗಿತ್ತು. ಪಠ್ಯ ಪುಸ್ತಕವನ್ನು ಏಕೆ ಬದಲಾಯಿಸಬಾರದು ಎಂದುಕೊಂಡು ಹೊಸ ಬಾಲಬೋಧೆಗಳನ್ನು ಹುಡುಕಲು ಶುರುಮಾಡಿದೆ. ನಾಲ್ಕಾರು ಕಣ್ಣಿಗೆ ಬಿದ್ದವು. ಅವುಗಳಲ್ಲಿ ಒಂದು ಮಾತ್ರ ನನಗೆ ತುಂಬಾ ಆಕರ್ಷಕವಾಗಿ ಕಂಡಿತು.

ಸಾಮಾನ್ಯವಾಗಿ ಮಕ್ಕಳಿಗೆ ಕನ್ನಡ ಕಲಿಸುವಾಗ ಕೇವಲ ಸ್ವರ, ವ್ಯಂಜನಗಳನ್ನು ಮಾತ್ರ ಉಪಯೋಗಿಸಿ ಮೊದಲ ಪಾಠಗಳನ್ನು ರಚಿಸುತ್ತಾರೆ. ಈ ಬಾಲಬೋಧೆಯಲ್ಲೂ ಹಾಗೆ ಇತ್ತು. ಆದರೆ ಪಾಠಗಳು ಸ್ವಾರಸ್ಯವಾಗೂ, ಮಾರ್ಮಿಕವಾಗೂ ಇದ್ದವು. ಪಾಠಗಳು ಬಲಿತವರಿಗೆ ಬರೆದಂತೆ ಇದ್ದರೂ, ಈಗಿನ ಕಾಲದ ಪುಟಾಣಿಗಳಿಗೆ, ಕಾಗುಣಿತ ಕಲಿಯುವ ಮೊದಲೇ ಜೀವನದ ಮುಖ್ಯ ಮೌಲ್ಯಗಳನ್ನು ಕಲಿಸುವ ಧ್ಯೇಯ ಲೇಖಕರಿಗೆ ಇದ್ದಂತೆ ತೋರಿತು. ಆ ನವ್ಯ ಬಾಲಬೋಧೆಯ ಕೆಲವು ಪಾಠಗಳನ್ನು ಅಪರಂಜಿ ಓದುಗರ ಮುಂದಿಡುತ್ತಿದ್ದೇನೆ.

ಪಾಠ ೧



# ಬರ ಬಹಳ ಜನ

ದವಸದ ಬರ

ಜಲದ ಬರ

ಪವನದ ಬರ

ಬಹಳ ಜನ

ಪಂಗಡಗಳ ಜಗಳ

ಹರನ ದಯ

ಸಕಲರ ಮರಣ

ಹರ ಹರ ಹರ

ಜನ ಗನ ಮನ

## ಪಾಠ ೨



# ಜಪ ಹರ ದಯ

ಜಪದ ಫಲ– ಹರನ ದಯ

ಮದನ ಸಂಬಳ ತಂದ

ಸಂಬಳದ ಸಮಯ ಸಂತಸದ ಸಮಯ

ನಂತರದ ಸಮಯ ಸಂಕಟದ ಸಮಯ.



# ಮರ ರಸ ಆನಂದ

ಈ ಮರ ಈಚಲ ಮರ

ಆ ಮರ ಈಚಲ ಮರ

ಮರದ ರಸ ಜನರ ಮಜ

ಈಗ ಜನರ ಆನಂದದ ಸಮಯ.

ಪಾಠ ೩



# ಗಂಧ ಆಸನ ಬಲ

ಈ ಆಸನ ಗಂಧದ ಮರದ ಆಸನ
ಚಂದನದ ಆಸನ ಚಂದ
ಆಸನದ ಬಲ ಬಹಳ
ಆಸನದ ನರ ನಟ
ನಟನ ಭಯ ಪತನದ ಭಯ
ಜನ ನಟನ ಚಮಚ
ಆಸನದ ಬಲ ಸಕಲರ ನಮನ.

ಪಾಠ ೪



# ಕವನ ಪದಕ ದಂಡ

ಆನಂದ ಬಂದ
ಪದಕ ತಂದ
ಯಶದ ಪದಕ
ಪದಕ ಥಳಥಳ
ಥಳಥಳದ ಪದಕ ದಂಡ

ಸರಸಳ ಕವನ
ರಸದ ಔತಣ
ಪದದ ಆಟ ಬಹಳ ಚಂದ
ಮಂದ ಕಂದ–ಕವನ ದಂಡ.

ಪಾಠ ೫



# ಮನ ಕಸ ಕಪಟ

ಜನರ ಮನ. ಮನದ ಕಸ
ಕಪಟದ ಜನರ ತಂಡ
ತಂಡಗಳ ಜನನ. ಕಲಹದ ಜನನ.
ಲಂಚದ ಆಟ. ಪರರ ಹಣ. ಸರಳ ಹಣ.
ಹಣದ ಬಲ. ಧನದ ಮದ.
ತಂಡದ ಜಯ. ಜನರ ಕಳವಳ.

## ಪಾಠ ೬




# ದಸರ ರಜ ಮಜ

ದಸರ ರಜ. ರಜದ ಮಜ

ಆಗ ಊಟದ ಗಮನ

ಊಟದ ಚಪಲ

ಔತಣದ ಊಟ ಬಹಳ ಚಂದ

ಆಗ ಊಟದ ಮಜ. ಈಗ ಉದರದ ಔಷಧ.

ಉಕ್ತಲೇಖನ:-

ಅರಸ ಆಗ ಆಟ ಆಸನದ ಆಟ ಈಗ – ಪಯಣ – ಯಮನ ಭಟ ಅರಸನ ತಳಮಳ ಪಾಪದ ಫಲ ಥರಥರ ಭಯ.

ಕಂದ – ಆಗ ಸಂತಸ – ಈಗ ಸಂಕಟ – ಹರ ಹರ ಹರ – ಜನ ಗನ ಮನ.

# ಮಿ. ನಾಗ್–ಫಿಲ್ಮ್ ಹೀರೋ

ಗಾಯತ್ರಿ

ಬೆಳಿಗ್ಗೆ ಅಪ್ರೊತ್ತಿಗೇ ಎದ್ದು ಗಾರ್ಡನ್ನಿನಲ್ಲಿ ಸುತ್ತಾಡೋ ಅಭ್ಯಾಸ ಮಾಡಿಕೊಂಡಿದ್ದೀನಿ. ಇದು ಯಾವಾಗಿನಿಂದ ಶುರು ಮಾಡ್ಕೊಂಡೆ ಅಂತೀರಾ? ನಮ್ಮನೆ ಎದುರುಗಡೆ ದೊಡ್ಡ ಬಂಗ್ಲೇಲಿ ದೊಡ್ಡ ಮನುಷ್ಯರು ಅವರ ಗಾರ್ಡನ್ನಿನ್ನಲ್ಲಿ ಸುತ್ತಾಡೋದನ್ನ ನಾನು ಕಿಟಕಿಯಿಂದ ನೋಡ್ತಾನೇ ಇದ್ದೆ. ಅವರೇನೋ ವಿಶಾಲವಾದ ಗಾರ್ಡನ್ನಿನಲ್ಲಿ ವಾಕಿಂಗ್ ಮಾಡಿದರೆ, ನಾನು ಸುಮ್ಮನೆ ಪುಟ್ಟ ಕಾಂಪೌಂಡಿನಲ್ಲಿ atleast ನಿಂತಲ್ಲೇ ನಿಂತ್ಕೊಂಡು ಆಕಡೆ ಈಕಡೆ ನೋಡಬಹುದಲ್ವಾ? freedom of action ಉ!! ಸರಿ ಶುರು ಮಾಡೇ ಬಿಟ್ಟೆ.

ಪಾಟ್ಸ್‌ಗಳಲ್ಲಿ ಯದ್ವಾ ತದ್ವಾ ಬೆಳೆದಿದ್ದ ಕ್ರೋಟನ್ಸ್, ಕಮರಿ ಹೋಗಿದ್ದ ಕಣಗಿಲೆ, ಹೂವೇ ಬಿಡದ ದಾಸ್ವಾಳ, ಮುಖಕ್ಕೇ ಚುಚ್ಚುವ ಬೋಗನ್‌ವಿಲ್ಲಾ ಇನ್ನೂ ಏನೇನೋ ವೆರೈಟಿಗಳನ್ನು ಆಸ್ವಾದಿಸುತ್ತಾ ಇದ್ದೆ. ಸಡನ್ನಾಗಿ ಪೊದೆಯಲ್ಲಿ ಏನೋ ಸರಿದಂತಾಯಿತು. ಗಕ್ಕನೆ ನಿಂತಲ್ಲೇ ನಿಂತೆ. ಒಂದೆರಡು ಗಜ ಉದ್ದ ಇದ್ದ ಒಂದು ನಾಗರಹಾವು ನನ್ನ ಮುಂದೆ ಹೆಡೆಯೆತ್ತಿ ನನ್ನನ್ನೇ ದೃಷ್ಟಿಸಿ ನೋಡುತ್ತಾ ನಾಲಗೆ ಅಲ್ಲಾಡಿಸಿತು. ಒಂದ್ನಿಮಿಷಾ ಅಲ್ಲೇ freeze ಆದೆ. ತಕ್ಷಣ ಅಲ್ಲೇ ಬಿದ್ದಿದ್ದ ಕ್ರಿಕೆಟ್ ಬ್ಯಾಟನ್ನು ಮೇಲೆ ಎತ್ತಿದೆ. (ಇನ್ನು ಮುಂದೆ ಕ್ರಿಕೆಟ್ ಬ್ಯಾಟುಗಳ ಉಪಯೋಗ ಇಷ್ಟೇ!?)

"ನಿಲ್ಲಿಸು" ಅಶರೀರವಾಣಿ.

ಕೈಯ ಬಾಟು ಅರ್ಧದಲ್ಲೇ ನಿಂತಿತು.

ಹೌದು, ನಾಗರಹಾವೇ! ಮನುಷ್ಯನ ಧ್ವನಿಯಲ್ಲಿ?!

ನನ್ನ ಮುಖದ shape ನೋಡಿ ನಾಗ– "ನಾನೇ ಮಾತಾಡ್ತಿರೋದು, ಯಾಕಮ್ಮ ಆಶ್ಚರ್ಯವಾಯಿತಾ?"

ನನ್ನ ಗಂಟಲಲ್ಲಿ ಗರಗರ ಶಬ್ದವಷ್ಟೇ ಹೊರಬಂದಿದ್ದು.

ನಾಗ– "ಭಯಪಡಬೇಡಮ್ಮ, ನಾನು ನಿನಗೇನೂ ಮಾಡೊಲ್ಲ, ನೀನೇನೂ ಹೆದರ್ಕೋಬೇಡ"

ನಾನು ತಡಬಡಿಸಿದೆ,– "ಯಾರು ನೀನು? ಮನುಷ್ಯನ ಹಾಗೆ ಮಾತಾಡ್ತಾಯಿದ್ದೀಯಲ್ಲ"?!

ನಾಗ– "ಯಾಕಮ್ಮ ಮನುಷ್ಯರು ಬರೀ ವಿಷ ಕಕ್ತಾರೆ, ನಾವು ಮಾತನಾಡಿದರೆ ಆಶ್ಚರ್ಯನಾ? ಹುಂ ಇರಲಿ ನನ್ನ ವಿಷಯ ಹೇಳಬೇಕು ಅಂದರೆ

ಅದೊಂದು 22 ರೀಲಿನ ಕಥೆ ಆದಷ್ಟು censor ಮಾಡಿ ಹೇಳ್ತೀನಿ. ಮೊದಲು ಇಲ್ಲೇ ಎಲ್ಲಾದರೂ ಕೂತುಕೊಳ್ಳೋಣವಾ?"

ಅಲ್ಲೇ ಇದ ಕಲ್ಲು ಬೆಂಚಿನ ಕೊನೆಯಲ್ಲಿ ಕೂತೆ. ನನ್ನ ಪಕ್ಕದಲ್ಲೇ ನಾಗ ಮೈಸುತ್ತಿ ಹೆಡೆಯೆತ್ತಿ ಕುಳಿತಿತು.

ನಾಗ– "ಏನಮ್ಮಾ, ನನಗೆ ತಿಳೀದೇ ಕೇಳ್ತೀನಿ. ನನ್ನ ನೋದಿ ನಾನು ಯಾರು ಅಂತ ಕೇಳ್ತೀಯಲ್ಲಾ? ನನ್ನ personality, ನನ್ನ glamourಉ, ನನ್ನ style ನೋಡಿ ನಿನಗೆ film star ಅಂತ ಅನ್ನಿಸೋಲ್ವ?"

ನಡುಗುತ್ತಿದ್ದ ಕೈಗಳನ್ನು ಭದ್ರವಾಗಿ ಹಿಡ್ಕೊಂಡು ನಾಗನನ್ನೇ ದೃಷ್ಟಿಸಿದೆ. ಹೌದು! ನಾಗ full make-up ನಲ್ಲಿದ್ದ!

ನಾಗ– "ಆಶ್ಚರ್ಯ ಪಡಬೇಡಮ್ಮಾ, ನಾನು famous film Hero. ನನ್ನ ವಂಶಜರೆಲ್ಲಾ ಚಲನಚಿತ್ರದ ನಟರು. ನನ್ನ ಮುತ್ತಜ್ಜಿ ಹಳೇ 'ನಾಗಿನ್' film ನಲ್ಲಿ act ಮಾಡಿದಾಗ, ಮನೆಯಲ್ಲಿ ದೊಡ್ಡ ರಂಪವೇ ಆಯಿತಂತೆ. ಅವಳ ಮನೆಯವರು– "ನಮ್ಮ ವಂಶ ಎಂದರೇನು? ನಮ್ಮ ಸಂಪ್ರದಾಯ ಎಂದರೇನು? ನಮ್ಮನ್ನು ದೇವರು ಅಂತಾ ಪೂಜಿಸ್ತಾ ಇರೋವಾಗ ಸಿನಿಮಾಗಳಲ್ಲಿ ಹೆಡೆ ಆಡಿಸೋದು ಎಂದರೇನು?" ಅಂತ ಗಲಾಟೆ ಮಾಡಿದರಂತೆ. ನಮ್ಮ ಅಜ್ಜಿ ಇದಕ್ಕೆ ಯಾವುದಕ್ಕೂ ಪುಂಗಿ ಊದದೆ ಚಿತ್ರದಲ್ಲಿ ನಟಿಸಿದಳಂತೆ. ಆ ಚಿತ್ರ Hit ಆಗಿ ನಮ್ಮ ಅಜ್ಜಿ popular ಆದಮೇಲೆ, ತಲೆಮರೆಸಿಕೊಂಡು, ಹುತ್ತದಲ್ಲೇ ಅಡಗಿದ್ದ ಅವಳ ಮನೆಯವರು, ಆಮೇಲೆ ಹೆಡೆಯೆತ್ತಿ ತಿರುಗಾಡಲು ಶುರುಮಾಡಿದರಂತೆ. ಹೀಗೆ ಶುರುವಾಯಿತು ತಮ್ಮ ನಮ್ಮ ಮನೆತನದ profession ಉ. ಏನಮ್ಮಾ ನಾನು act ಮಾಡಿರೋ picture ಗಳನ್ನು ನೀನು ನೋಡೇ ಇಲ್ಲವಾ?!

ತುಟಿ ವರಿಸಿಕೊಂಡು ತಡವರಿಸಿದೆ– "ಇ...ಲ್ಲಾ"

ನಾಗ- "ಏನಮ್ಮಾ ನೀನು? ಇಷ್ಟು Backwardಉ? ನೋಡೋಕೆ ಕಾಲೇಜು ಹುಡುಗಿ ಥರಾ ಇದ್ದೀಯಾ ಈಗೆಲ್ಲಾ ಕಾಲೇಜು ಹುಡುಗರು, ಹುಡುಗೀರು ಯಾವಾಗಲೂ theater ನಲ್ಲೇ ಇರ್ತಾರೆ"?!

ನನ್ನನ್ನು ಕಾಲೇಜು ಹುಡುಗಿ ಅಂದದ್ದಕ್ಕೆ ಖುಷಿಯಾದರೂ ನನ್ನ ಕಾಲೇಜ್ ಮಗ ಯಾವಾಗಲೂ theater ನಲ್ಲೇ ಇರೋದು ನೆನೆಸಿಕೊಂಡು ತಲೆ ತಿರುಗಿತು.

ನಾಗ–"ನಾನು ಲೆಕ್ಕವಿಲ್ಲದಷ್ಟು picture ಗಳಲ್ಲಿ ನಟಿಸಿದ್ದೀನಿ. ನನ್ನ super Hit film 'ನಗೀನಾ'ದಲ್ಲಿ ಶ್ರೀದೇವಿ ನನ್ನ Co-Star. 'ಗರುಡ ರೇಖೆ' ಚಿತ್ರದಲ್ಲಿ ಮಾಧವಿ ನನ್ನ ಜೊತೆ ನಟಿಸಿದ್ದಾಳೆ. 'ನಾಗದೇವತಾ', 'ನಾಗಮಹಿಮಾ' "ಆಯಿ ಮಿಲನ್ ಕಿ ರಾತ್" ಒಂದೇ ಎರಡೇ, ಬೇಕಾದಷ್ಟು!"

"ನಾಗರಹಾವೂ?"–––ನಾನು ಮೆಲ್ಲನೆ ಉಸುರಿದೆ.

ನಾಗ ಬುಸ್ಸನೆ ರೇಗಿದ– "ಆ ಚಿತ್ರ ಬಂದಾಗ ನಾವೆಲ್ಲಾ ಸೇರ್ಕೊಂಡು ಪುಟ್ಟಣ್ಣ ಕಣಗಾಲ್ ಮೇಲೆ Case ಹಾಕಬೇಕು ಅನ್ಕೊಂಡಿವಿ. ಆ Picture title misleadingಉ. ನಮ್ಮ ಹೆಸರಿಟ್ಟು ನಮ್ಮ ಪಾತ್ರನೇ ಇಲ್ಲಾ. ಜನಕ್ಕೆಲ್ಲಾ ತುಂಬಾ dissappoint ಆಯಿತಂತೆ. ನಾವೆಲ್ಲಾ ದೊಡ್ಡ ಗಲಾಟೇನೇ ಮಾಡಬೇಕು ಅನ್ಕೊಂಡಿವಿ. ಆಮೇಲೆ ಯಾಕೆ ಪಾಪ, "ಮಾಲಾಶ್ರೀ–ಮಂಗ" ಆದಂತೆ ಪುಟ್ಟಣ ಇನ್ನೇನೋ ಆಗೋದು ಬೇಡ ಅಂತ ಸುಮ್ಮನಾಗಿಬಿಟ್ವಿ"

"ಅದ್ಸರಿ ನಾನು ಇಲ್ಲಿ ಹೇಗೆ ಬಂದೆ ಅಂತ ಗೊತ್ತಾ? ಇಲ್ಲೇ ಎಲ್ಲೋ ನನ್ನ ನಾದಿನಿ ಇದ್ದಾಳಂತೆ. ನನ್ನ Next movie ಲಿ ಅವಳಿಗೊಂದು Role ಕೊಡಿಸೋಣ ಅಂತ ಹುಡ್ಕೊಂಡು ಬಂದೆ. ರಾತ್ರಿ ಕತ್ತಲೇಲಿ ದಾರಿ ತಪ್ಪಿ, ಈ ಪೊದೇಲೀ ಉಳ್ಕೊಂಡೆ. ತುಂಬಾ ಸಾಕಾಯ್ತು. ನನಗೆ ಈಗೆಲ್ಲಾ ಹೀಗೆ ನುಸುಳಾಡೋ ಅಭ್ಯಾಸ ತಪ್ಪೋಗಿದೆ. ಯಾವಾಗಲೂ Producer ರ director ರ ಜೊತೆಯಲ್ಲಿ ಕಾರಲ್ಲೇ ಓಡಾಡೋದು. ಇಲ್ಲಾ ಹೀರೋ ಅಥವಾ ಹೀರೋಯಿನ್ ಜೊತೆ ಏರ್ ಕಂಡಿಶನ್ಡ್ ರೂಮಲ್ಲಿ ಇರ್ತೀನಿ. ನೋಡಮ್ಮಾ, ಬೆಳಗ್ಗಾಗೋಕೆ ಮುಂಚೆ ಹೋಟೆಲ್ ರೂಮ್ ಸೇರ್ಕೊಂಡು ಬಿಡ್ತೀನಿ. ಇಲ್ಲವಾದರೆ ರಸ್ತೇಲಿ ಎಲ್ಲರೂ ನನ್ನ ರೆಕಗ್ನೈಸ್ ಮಾಡಿ ಆಟೋಗ್ರಾಫ್, ಫೋಟೋಗ್ರಾಫ್ ಅಂತ ಸುತ್ಕೊಂಡುಬಿಡ್ತಾರೆ. ನನ್ನ ನಾದಿನೀನ ಹುಡ್ಕೋಕೆ ನಾನು ಆ Producer ನೇ ಕಳಿಸ್ತೀನಿ. ಅವಳ್ನ ಬುಟ್ಟೀಲಿ ಹಾಕ್ಕೊಂಡು ಕಾರಲ್ಲಿ ಕರ್ಕೊಂಡು ಬರ್ತಾನೆ"

ನಾಗ ಕಲ್ಲು ಬೆಂಚಿನಿಂದ ಮೆಲ್ಲನೆ ಜಾರಿದ. ನಾನು ತಟ್ಟನೆ– "ರೀ ಒಂದ್ನಿಮಿಷ, ನೀವು ಕನ್ನಡ ಮಾತಾಡೋದು ಹೇಗೆ ಕಲಿತಿರಿ?!"

ನಾಗ ತಲೆದೂಗಿದ– "good Qustion. ನೋಡಮ್ಮಾ ನಾನು ಕನ್ನಡದವನೇ ಅಲ್ಲಾ. ನಿಮ್ಮ ಕರ್ನಾಟಕದಲ್ಲಿ ತೆಲುಗಿನಿಂದ, ಹಿಂದಿಯಿಂದ ಹೀರೋಯಿನ್‌ಗಳನ್ನ ಕರ್ಕೊಂಡು ಬರ್ತಾರೆ. ಅವರಿಗೆ ಕನ್ನಡ ಕಲಿಸಲು ದೊಡ್ಡ ದೊಡ್ಡ ಪಂಡಿತರು ಬಂದು ಹೇಳ್ಕೊಡ್ತಾ ಇರೋವಾಗ, ನಾನೂ ಅಲ್ಲೆ ಸೋಫಾ ಮೇಲೆ ಸುತ್ಕೊಂಡಿರ್ತೀನೆ. ಅವರಿಗಂತೂ ಕನ್ನಡ ಬರಲಿಲ್ಲ. ಆದರೆ ನಾನು ಚೆನ್ನಾಗಿ ಕಲಿತುಕೊಂಡುಬಿಟ್ಟೆ. ನಾನಿನ್ನು ಬರ್ಲಾಮ್ಮಾ"?

ನಾನೂ ತಕ್ಷಣ ಎದ್ದು ನಿಂತೆ.

"ರೀ Mr. ನಾಗ್. ಒಂದು Cup ಹಾಲು?"

Mr. ನಾಗ್ ಬುಸ ಬುಸನೆ ನಕ್ಕಿದ.

"ಏನಮ್ಮಾ joke ಮಾಡ್ತೀದೀಯಾ?! ನೀನು film parties ಬಗ್ಗೆ ಕೇಳೇ ಇಲ್ವಾ? ನಾನೀಗ ಬರೀ Scotch ವಿಸ್ಕಿ. Anyway ಥ್ಯಾಂಕ್ಸಮ್ಮಾ. ಬರ್ತೀನಿ" ನಾಗ ಸರ್ರನೆ ಮಾಯವಾದ.

ಶುಭಾಶಯಗಳೊಂದಿಗೆ

**ಶ್ರೀ ಎಚ್.ಆರ್. ಶ್ರೀನಿವಾಸ್**

**5210, ಸ್ಯಾಂಡೀ ಗ್ರೋವ್**

**ಕಿಂಗ್‌ವುಡ್, ಟೆಕ್ಸಸ್**

**ಯು.ಎಸ್.ಎ.**

# ನೀವು ಚಿರಯೌವನೆಯರೇ?

ವಿಜಯಾ ಸಚ್ಚಿದಾನಂದ

ಮಾನವ ಹುಟ್ಟಿದ ಘಳಿಗೆಯಿಂದ ಕ್ಷಣಕ್ಷಣಕ್ಕೂ ಬೆಳೆಯುತ್ತಾ ವೃದ್ಧಾಪ್ಯದ ಕಡೆಗೆ ಕಾಲಿಡುವುದು ಪ್ರಕೃತಿ ನಿಯಮವೆಂದು ನೀವು ಚೆನ್ನಾಗಿ ತಿಳಿದಿದ್ದರೂ ಸಹ ನೀವು ಮಾತ್ರಾ ಆ ಪ್ರಕೃತಿ ನಿಯಮಕ್ಕೆ ಹೊರತಾಗಿ ಈ ನಶ್ವರ ಪ್ರಪಂಚದಲ್ಲಿ ಚಿರಯೌವನರೆಂದು ನಿಮ್ಮ ಧೃಡನಂಬಿಕೆಯೆ? ಹಾಗಿದ್ದಲ್ಲಿ ಆ ನಿಮ್ಮ ನಂಬಿಕೆಯನ್ನು ನಿರ್ಧಾರ ಪಡಿಸುವ ಈ ಕೆಳಗೆ ಕಂಡ ಪ್ರಶ್ನೆಗಳಿಗೆ ಸರಿಯಾದ ಉತ್ತರ ನೀಡಿ.

(ಕ) ನಿಮ್ಮ ಹೊಳಪಾದ ಮಿರಿಮಿರಿಯುವ ಕರಿ ಕೇಶಗುಚ್ಛ ಇತ್ತೀಚಿಗೆ ಶ್ವೇತವರ್ಣವಾಗಿ ಕಾಣುತ್ತಿರುವ ಕಾರಣ ಬಿಸಿಲಿನ ಬೇಗೆಯೆಂದು ಒತ್ತಿ ಹೇಳುವಿರಾ? — ಹೌದು/ಇಲ್ಲ — 5 ಅಂಕಗಳು

(ಖ) ನೀವು ನಿಮ್ಮ ಕಾರನ್ನು ನಡೆಸಲು ಕಲಿತುಕೊಳ್ಳದಿರುವುದು (ಇತರರಿಗೆ ಕ್ಷುಲ್ಲಕವಾಗಿ ಆದರೆ ನಿಮಗೆ ಅಧ್ಭುತವೆನಿಸುವ) ನಿಮ್ಮ ಹುಟ್ಟಿದ ತಾರೀಖನ್ನು ನೊಂದಿಸಿಕೊಳ್ಳನೇಕೆನ್ನುವ ಕಾರಣದಿಂದಾಗಿಯೇ? — ಹೌದು/ಇಲ್ಲ — 5 ಅಂಕಗಳು

(ಗ) ಮಸಲ ನೀವು ನಿಮ್ಮ ಮೊಮ್ಮಗ/ಮೊಮ್ಮಗಳನ್ನು ಹೊರಗೆ ತಿರುಗಾಡಲು ಕರೆದುಕೊಂಡು ಹೋಗುತ್ತಿರುವಾಗ ಯಾರಾದರೂ ನಿಮ್ಮನ್ನು ಅಜ್ಜಾ/ಅಜ್ಜಿಯೆಂದು ಸಂಭೋದಿಸಿದರೆ ಅಂಥವರನ್ನು ಹುರಿದು ಮುಕ್ಕಿಬಿಡುವಷ್ಟು ಕೋಪ ಬರುವುದೇ? ನಿಮ್ಮ ಮನಸ್ಸಿಗೆ ಅತೀವ ವೇದನೆಯುಂಟು ಮಾಡುವುದೇ? — ಹೌದು/ಇಲ್ಲ — 5 ಅಂಕಗಳು

ನೀವು ಗಣಿತದಲ್ಲಿ ಎಷ್ಟರ ಮಟ್ಟಿನ ಪರಿಣಿತಿಯನ್ನು ಹೊಂದಿದ್ದೀರಿ? ತಡೆಯಿರಿ! ಚಿರಯೌವನಕ್ಕೂ ಗಣಿತಕ್ಕೂ ಸಂಬಂದವಿಲ್ಲವೆಂಬ ಅಸಡ್ಡೆಯಿಂದ ಈ ಕೆಳಗಿನ ಪ್ರಶ್ನೆಯನ್ನು ಅಲಕ್ಷಿಸದೇ ಗಮನವಿಟ್ಟು ಓದಿ!

(ಘ) ಯಾರಾದರೂ ನಿಮ್ಮ ವಯಸ್ಸೆಷ್ಟೆಂದು
(ಅ) ಅಸಂಭದ್ಧ ಪ್ರಶ್ನೆಯನ್ನು ಮಾಡಿದಲ್ಲಿ ನಿಮ್ಮ ವಯಸ್ಸಿನ ಕೆಲವೇ ವರ್ಷಗಳನ್ನು ಕಳೆದು ಹಾಕಿ ಒಂದೇ ಕ್ಷಣದಲ್ಲಿ ನಿಮ್ಮ ಪ್ರಿಯ ಸ್ನೇಹಿತೆಯ

ವಯಸ್ಸಿಗೆ ಸೇರಿಸಿ ಅವಳನ್ನು ನಿಮಗಿಂತ
ಹಿರಿಯವಳನ್ನಾಗಿಸುವ ಛಾತಿಯನ್ನು ಪಡೆದಿದ್ದೀರಾ?

(ಆ) ಸಮಯಕ್ಕನುಗುಣವಾಗಿ ನಿಮ್ಮ ಮಕ್ಕಳ ಹೌದು/ಇಲ್ಲ
ವಯಸ್ಸನ್ನು ಕ್ಷಣದಲ್ಲಿಯೇ ಘಟಿಸಿ 5 ಅಂಕಗಳು
ಅದಕ್ಕನುಗುಣವಾಗಿ ನಿಮ್ಮ ವಯಸ್ಸನ್ನು
ಘಟಿಸುವ ಛಾತಿಯುಂಟೆ?

ಪ್ರತಿ "ಹೌದು"ಗಳೂ 5 ಅಂಕಗಳನ್ನು ತರುವಂತಹವಾಗಿ ನಿಮಗೆ ಇಪ್ಪತ್ತಕ್ಕೆ ಇಪ್ಪತ್ತು ಅಂಕ ದೊರೆತಲ್ಲಿ ನೀವು ಚಿರಯೌವನೆಯರೆಂಬುದರಲ್ಲಿ ಸಂದೇಹವೇಯಿಲ್ಲ!

ಆದರೆ ಈ ವಿಷಯ ನಿಮಗೊಬ್ಬರಿಗೆ ಮಾತ್ರವೇ ಗೊತ್ತೆ? ನಿಮ್ಮ ಪರಿಚಿತರಿಗೆ ಅದರ ಅರಿವೇ ಇಲ್ಲವೆ? ನಿಮ್ಮ ಪರಿಚಿತರು ನಿಮ್ಮನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ, ನೀವು ಅತ್ಯಂತ ಜಾಗರೂಕತೆಯಿಂದ ಅಲಂಕರಿಸಿಕೊಂಡರೂ ನಿಮ್ಮನ್ನು ಅತ್ತೆ, ಆಂಟಿ, ಅಜ್ಜಿ ಎಂದೆಲ್ಲಾ ಸಂಬೋಧಿಸಿ ನಿಮಗೆ ಅತ್ಯಂತ ವೇದನೆಯನ್ನುಟು ಮಾಡುತ್ತಿದ್ದಾರೆಯೆ? ಹಾಗಿದ್ದಲ್ಲಿ ಇಲ್ಲಿದೆ ಉಪಾಯ!

ನಿಮ್ಮ ಮನೆಯ ಬಳಿ ಯಾವ ಮಹಿಳೆಯೇ ಅಥವಾ ಮಹನೀಯನೇ ಆಗಲಿ (ನಿಮಗಿಂತ ಚಿಕ್ಕವರಿರಬಹುದು ಅಥವಾ ಚಿಕ್ಕವರಾಗಿ ಕಾಣಬಹುದು) ಅವರನ್ನು ನೀವು ಕಂಡ ತಕ್ಷಣ ದಯಾದಾಕ್ಷಿಣ್ಯವಿಲ್ಲದೇ ಆಂಟಿ/ಅಂಕಲ್, ಅತ್ತೆ/ಮಾವ ಎಂದು ಸಂಬೋಧಿಸಿ ಬಿಡಿ. ಹುಷಾರು! ಇದನ್ನು ಆದಷ್ಟು ಬೇಗ ಸಾಧಿಸಿಬಿಡಬೇಕು. ಇಲ್ಲದಿದ್ದರೆ ನಿಮ್ಮ ಎದುರಾಳಿಯೇ ನಿಮ್ಮನ್ನು "ಆಂಟಿ" ಎಂದು ಕರೆದುಬಿಟ್ಟರೆ ನಿಮ್ಮ ಕೆಲಸವೇ ಕೆಟ್ಟುಹೋದೀತು.

ವಿ.ಸೂ.

ನಾನು ನನ್ನ ಬಡಾವಣೆಗೆ ಬಂದ ಹೊಸದರಲ್ಲಿ ನಿಮಗೆ ಈ ಮೇಲೆ ತಿಳಿಸಿದ ಉಪಾಯವನ್ನು ಕಾರ್ಯರೂಪಕ್ಕೆ ತರುವುದನ್ನು ನಿಧಾನ ಮಾಡಿದ ಕಾರಣ ಈಗ ನನಗಿಂತ ಹಿರಿಯರಿಗೆಲ್ಲಾ "ಆಂಟಿ" ಯಾಗಿದ್ದೀನಿ.

ಎರಡನೆಯದಾಗಿ, ನಿಮ್ಮ ಸುತ್ತು ಮುತ್ತ ಇರುವ ಮಕ್ಕಳನ್ನು ಒಟ್ಟುಗೂಡಿಸಿ, ಅವುಗಳು ನಿಮ್ಮನ್ನು "ಆಂಟಿ" ಎಂದು ಕರೆಯುವ ಸಾಹಸ ಮಾಡುವ ಮೊದಲೇ ನೀವು "ಅಕ್ಕಾ" ಎಂದು ಕರೆಯುವಂತೆ ಹೇಳಿಕೊಟ್ಟುಬಿಡಿ. ಆದರೆ ಸಾವಧಾನ! ಇದು ಹಿರಿಯರ ಮುಂದೆ ಕಲಿಸುವ ಪಾಠವಲ್ಲ. ಹಿರಿಯರಿಲ್ಲದಿರುವಾಗ ಕಲಿಸುವ ಪಾಠವಿದು.

ಇದೆಲ್ಲಾ ಮಾಡಿಯೂ ಏನೂ ಪ್ರಯೋಜನವಾಗಲಿಲ್ಲವೆನ್ನುವಿರಾ. ನಿಮ್ಮನ್ನು ಮಕ್ಕಳೇ ಏನು, ಹಿರಿಯರೂ ಸಹ ಅತ್ತೆ, ಅಜ್ಜಿ ಎಂದೆಲ್ಲಾ ಸಂಬೋಧಿಸುತ್ತಿದ್ದಾರೆಯೆ? ಇದರಿಂದ ನಿಮ್ಮ ಚಿರಯೌವನತ್ವಕ್ಕೆ ಧಕ್ಕೆ ತಗಲಿದಂತಾಗಿದೆಯೆ?

ಆದರೂ ಏನೂ ಚಿಂತಿತರಾಗಬೇಡಿ! ನಿರಾಶರಾಗಬೇಡಿ! ನಾನು ಇತ್ತೀಚಿಗೆ ಕಲಿತ ಒಳ್ಳೆಯ ಉಪಾಯವನ್ನು ನಿಮಗೆ ಹೇಳಿಕೊಡುತ್ತೇನೆ. ಇದರಿಂದ ನೀವು

ಎಂತಹವರೇ ಆಗಿರಲಿ ಅಂದರೆ ಅಜ್ಜಿಯೇ ಆಗಿರಲಿ! ದೊಡ್ಡತ್ತೆಯೇ ಆಗಿರಲಿ– ನೀವು ಚಿರಯೌವನೆಯರೆಂದೇ ಸಾಬೀತು ಪಡಿಸುವಿರಿ. ಜೋಪಾನ! ನೀವು ಇದನ್ನು ಆದಷ್ಟು ಬೇಗ ನಿಮ್ಮ ಎದುರಾಳಿಯ ಮೇಲೆ ಪ್ರಯೋಗಿಸಿ ಬಿಡಿ! ಇಲ್ಲದಿದ್ದರೆ ನೀವು ನನ್ನಂತೆ ನಿಮ್ಮ ಎದುರಾಳಿಯ ಶಿಕಾರಿಯಾಗಬೇಕಾಗಿ ಬಂದೀತು.

ಇದಕ್ಕೆ ಬೇಕಾದ ಸಲಕರಣೆಗಳು: ನೀವು ನಿಮ್ಮ ಎದುರಾಳಿ ಮತ್ತು B.T.S ಅಂದರೆ "ಬಿಟ್ಟರೆ ತಿರುಗಿ ಸಿಕ್ಕದ" ಬಸ್ (ಎಂದು ನಮ್ಮ ಬಸ್ಸಿನ conductorಏ ಹೇಳಿದ್ದು.)

ಇತ್ತೀಚೆಗೆ ಮುಂದಿನ ಸುಮಾರು 16 ಸೀಟುಗಳನ್ನು ಅಸಹಾಯಕರಾದ ಹೆಂಗಸರಿಗೆಂದು ಮೀಸಲಿಟ್ಟಿರುವ ವಿಷಯ ಎಲ್ಲರಿಗೂ ತಿಳಿದಿರುವುದಾಗಿದೆಯಲ್ಲವೆ! ಬಸ್ಸುಗಳೂ ಸಹ bursting at the seams ಅನ್ನುವ ಹಾಗೆ ತುಂಬಿ ತುಳುಕಾಡುತ್ತಿರುತ್ತವೆಯಲ್ಲವೇ! ಅಂತಹ ಒಂದು ಬಸ್ಸನ್ನು ಹತ್ತಿ. ನಿಮ್ಮ ಬಡಾವಣೆಯ ಅತಿ ಯೌವನೆಯೂ ಅದೇ ಬಸ್ಸನ್ನು ಹತ್ತಿದರೆಂಬುದನ್ನು ಗ್ಯಾರಂಟಿ ಮಾಡಿಕೊಂಡರೆಂದರೆ ಇನ್ನೂ ಉತ್ತಮ. ನೀವು ಅದೃಷ್ಟವಂತರಾದರೆ ಒಂದು ಖಾಲಿ ಸೀಟು ನಿಮ್ಮದಾಗಬಹುದು. ಇಲ್ಲವಾದರೆ ಕೊಕ್ಕರೆಯಂತೆ ಒಂದು ಕಾಲಿನ ಮೇಲೆ ನಿಂತು ಬ್ಯಾಲೆನ್ಸ್ ಮಾಡುವ ಸೌಲಭ್ಯವಂತೂ ಖಂಡಿತವಾಗಿಯೂ ದೊರೆಯುತ್ತದೆ. ಏಕೆಂದರೆ ನಮ್ಮ ಬಸ್ ಚಾಲಕ ಮತ್ತು ಕಂಡಕ್ಟರ್ ಬಸ್‌ಗಳನ್ನು ಪುಷ್ಪಕ ವಿಮಾನದ model ಎಂದೇ ನಂಬಿದ್ದಾರೆ. ಪುಷ್ಪಕ ವಿಮಾನದಲ್ಲಿ ಎಷ್ಟು ಜನ ಏರಿದರೂ ಇನ್ನೊಬ್ಬರಿಗಾಗುವಷ್ಟು ಸ್ಥಳ ಇದ್ದೇ ಇರುತ್ತಿತ್ತೆಂಬ ಪ್ರತೀತಿ. ಆದಕ್ಕೆ ಬಸ್‌ನಲ್ಲಿ ಜನ ತುಂಬಿದಷ್ಟು ಇನ್ನೂ ತುಂಬಿಸಿಕೊಳ್ಳುತ್ತಿರುತ್ತಾರೆ. ಹಾಗೆ ನೀವೇನಾದರೂ ನಿಂತಿದ್ದು ಆಕಸ್ಮಾತ್ ನಿಮ್ಮ ಹತ್ತಿರದ ಸೀಟೇನಾದರೂ ಖಾಲಿಯಾಗಿದ್ದಲ್ಲಿ ನೀವು ಅದನ್ನು ಆಕ್ರಮಿಸುವ ಚೇಷ್ಟೆ ಮಾಡಬೇಡಿ. ನಿಮ್ಮ ಹತ್ತಿರದಲ್ಲಿ ನಿಂತಿರುವವರಿಗೆ (ಅವಳು ನಿಮಗಿಂತ ಚಿಕ್ಕವಳಿರಬಹುದು ಅಥವ ಓರಿಗೆಯವಳೇ ಆಗಿರಬಹುದು. ಅದರಲ್ಲಂತೂ ನಿಮ್ಮೊಂದಿಗೆ ಬಸ್ ಹತ್ತಿದ ನಿಮ್ಮ ಎದುರಾಳಿಯಾದರಂತೂ ಇನ್ನೂ ಉತ್ತಮ) "ಆಂಟಿ ಕುಳಿತುಕೊಳ್ಳಿ. ಯಾಕೋ ತುಂಬಾ ಸುಸ್ತಾಗಿ ಕಾಣುವಿರಲ್ಲ" ಎಂದು ತುಂಬಾ ಪರಿಚಿತರಂತೆ ಮಾತನಾಡಿಸಿ ಕೂರಿಸಿಬಿಡಿ. ಆಗ ನೋಡಿ! ಜಯ ನಿಮ್ಮದೇ! ನೀವಂತೂ ಚಿರಯೌವನರೇ ಸರಿ! ನಿಮಗೆ ಖಂಡಿತವಾಗಿ ಯೌವನೆಯ ಪಟ್ಟ ದೊರೆಯುವುದು. ಗುಟ್ಟಾಗಿ ನಿಮ್ಮ ಕಿವಿಯಲ್ಲಿ ಹೇಳುವುದಾದರೆ ನಿಮ್ಮ ವಯಸ್ಸಿನ 20-30% ಘಟಿಸುವುದರಲ್ಲಿ ಸಂಶಯವೇಯಿಲ್ಲ.

ಈ ಉಪಾಯವನ್ನು ಖಂಡಿತ ಹೀಗಳೆಯಬೇಡಿ. ಸೀಟೂ ಹೋಯಿತು ಚಿರಯೌವನದ ಪಟ್ಟ ದೊರಕಿತೋ ಇಲ್ಲವೋ ಎನ್ನುವ ಅನುಮಾನವೂ ಬೇಡ. ಪಟ್ಟ ಖಂಡಿತ ದೊರಕೇ ದೊರಕಿದೆಯೆಂದುಕೊಳ್ಳಿ. ಈ ನನ್ನ ಸ್ವಂತ ಅನುಭವ ಕೇಳಿ ನೀವೇ ನಿರ್ಧರಿಸಿ.

ನನಗೆ ಚಿತ್ರಳ ಪರಿಚಯವಾಗಿದ್ದು ನಾವು "ತರುಣ್ ನಗರ"ದಲ್ಲಿ ನಮ್ಮ flat ಗೆ shift ಆದ ಎರಡೇ ದಿನಗಳಲ್ಲಿ. ಆ ದಿನ ಹೊಸ ವಾತಾವರಣದಲ್ಲಿ

ಏನೋ ಒಂದು ತರಹ ಉಸಿರು ಕಟ್ಟಿದಂತಾಗಿ balconyಗೆ ಬಂದು ನಿಂತಿದ್ದೆ. ಎದುರಿಗೆ ಹರಡಿರುವ ಕೊಳಚೆ ಪ್ರದೇಶವನ್ನು ಕಂಡು ಮೂಗು ಮುರಿಯುತ್ತಲೂ ಮತ್ತು ಪಕ್ಕದಲ್ಲೇ ನೈಸರ್ಗದ ಕುರುಹಾಗಿ ಉಳಿಸಿದ್ದ ಏಕೈಕ ಮರವನ್ನೂ, ಅದರ ಮೇಲಿನ ಕಾಗೆ ಗುಬ್ಬಚ್ಚಿಗಳನ್ನೂ ಕಂಡು ಆನಂದದಿಂದ ತನ್ಮಯಳಾಗಿ ನಿಂತಿದ್ದೆ. ಆವಾಗ ಎಲ್ಲಿಂದಲೋ ತೇಲಿ ಬಂದಿತ್ತು"Hi"ಅಂತ ಮಧುರ ಧ್ವನಿಯೊಂದು.

(ನಂಗೆ ಎಲ್ಲಾದರೂ "ಹಾಯ್"ಅನ್ನೋದನ್ನ ಕೇಳಿದರೆ ಜ್ಞಾಪಕಕ್ಕೆ ಬರೋನು ಅಂದ್ರೆ ನಂ ಪೀತಾಂಬ್ರೂ. ಅವನು ಅಮೇರಿಕಕ್ಕೆ higher studiesಗೆ ಅಂತ ಹೋದ ಹೊಸದ್ರಲ್ಲಿ campus ನಲ್ಲಿ ಹೋಗ್ತಾಯಿದ್ದಾಗ ಅಲ್ಲಿ ಶ್ವೇತ ಯುವತಿ ಇವನನ್ನು ನೋಡಿ "ಹಾಯ್" ಅಂದ್ಲಂತೆ. ಇವನು ತನ್ನ ಹಿಂದೆ ಎಲ್ಲೋ ದನದ ಮಂದೆ ಬರ್ತಿರ್ಬೇಕು ಅದನ್ನ ಅಟ್ತಾಯಿದಾರೇನೊ ಅಂದ್ಕೊಂಡು ಓಡೋದಕ್ಕೆ ಶುರುಮಾಡಿದನಂತೆ. ಅವಳಿಗೆ ಯಾಕಪ್ಪಾ ಇವನು ಹೀಗೆ ಓಡ್ತಾಯಿದ್ದಾನೇಂತ ಆಶ್ಚರ್ಯವಾಯ್ತಂತೆ. ಆಮೇಲೆ ಅವಳಿಗೆ ಗೊತ್ತಾಯ್ತಂತೆ ಇವನಿಗೆ ಇಲ್ಲಿ ರೀತಿ ನೀತಿ ಗೊತ್ತಿಲ್ವೇನೋ ಅಂತ. ಹತ್ರ ಬಂದು, ಓಡೋದು ನಿಲ್ಸು, "ಹಾಯ್" ಅನ್ನೋದು ಇಲ್ಲಿಯೋರ Greeting ಅಷ್ಟೆ ಅಂತ ಹೇಳ್ಕೊಟ್ಟಂತೆ. ಆಮೇಲೇನು! ಅಜ್ಜಿ ಅವನಿಗೇಂತ ಮಾಡಿ ಕಳುಹಿಸಿದ "ಊಪ್‌ಕಾಯ್" ಅಂದ್ರೆ ಉಪ್ಪಿನಕಾಯಿನ ಅವಳಿಗೆ ತಿನ್ಸಿ ತುಂಬಾ ಹತ್ತಿರದೋಳನ್ನಾಗಿ ಮಾಡಿಕೊಂಡ್ಬಿಟ್ಟ ಅನ್ನೋದು ಬೇರೆ ವಿಷಯ. ಈ ವಿಷಯಾನ ನಿಮಗೆ ಆಗ್ಲೇ ಹಿಂದೇನೇ ಹೇಳಿದ್ದೀನಿ ಅಂತ ಕಾಣುತ್ತೆ!)

ಆದ್ರೆ ನನಗೇನೂ ಹಾಗಾಗ್ಲಿಲ್ಲ. ನಾನು ಕನ್ನಡ ನಾಡಿನಲ್ಲೇ ಹುಟ್ಟಿ ಬೆಳೆದೋಳಾದ್ರೂ ನನ್ಗೆ ವಿದೇಶಿಯರ ನಡೆನುಡಿಗಳೆಲ್ಲಾ ಕರತಲಾಮಲಕ. ಅದಲ್ಲದೆ ನನ್ನ ಮನೆ ಮಾತು ಕನ್ನಡವೇ ಆದ್ರೂ ನಾನಿನ್ನೊಬ್ಬಳು ಕನ್ನಡದ ಗೆಳತಿಯನ್ನು ಕಂಡಾಗ್ಲೆಲ್ಲಾ ಇಂಗ್ಲೀಷಿನಲ್ಲೇ conversation ಮಾಡೋದು! ನಾನೇ ಏನು ತುಂಬಾ ನಾಗರೀಕರು ಅಂತ ಅಂದ್ಕೊಂಡೋರೆಲ್ಲಾ ಹಾಗೇ ಮಾಡೋದು! ಆದ್ರೆ ನನಗಾದಾಶ್ಚರ್ಯವೇನಂದ್ರೆ, ಆ ಧ್ವನಿ ಎಲ್ಲಿಂದ ಬಂತೂಂತ? ಯಾಕೇಂದ್ರೆ, ಪಕ್ಕದ ಬಾಲ್ಕನಿಗಳಲ್ಲಿ ಯಾರೂ ಕಾಣ್ತಿರಲಿಲ್ಲ. ಆಮೇಲೆ ಕೊಂಚ ಕತ್ತನ್ನ ಅತ್ಲಾಗಿತ್ಲಾಗೆ ತಿರುಗಿಸಿದ ಮೇಲೆ ಗೊತ್ತಾಯ್ತು. ಕೆಳ ಬಾಲ್ಕೋನಿಯಿಂದ ಬರುತ್ತಿರುವ ಧ್ವನಿಯೆಂದು. ಸುಮಾರು ಮೂವತ್ತರ ಮುಖ, ಹಾಕಿಕೊಂಡಿದ್ದುದು ರಾಜಸ್ಥಾನಿ ಅಲೆಮಾರಿನವರ ತರಹ ಕನ್ನಡಿ ತುಂಬಿದ ಲಂಗ, matching blouse- ಒಳ್ಳೇ ಟೀನೇಜರ್ ತರಹ ಕಾಣುತ್ತಿದ್ದಳು. ನನ್ನ ಕಣ್ಣು ಅವಳ ಮೇಲೆ ಬಿದ್ದೊಡನೆ "Hi, welcome to Tarun Nagar" ಎಂದಳು. ಆ ನಿಮಿಷದೆಂದಲೇ ಶುರುವಾಯ್ತೆನ್ನ ಬಹುದು ನಮ್ಮ ದೋಸ್ತಿ. ಸಂಧಿಸಿದ ಕೆಲವೇ ಸಮಯದಲ್ಲಿ ಆ flat ನಲ್ಲಿ ವಾಸಮಾಡೋರ ಪರಿಚಯ ಅಂದರೆ ಅವರ ಬಯೋಡಾಟವನ್ನೆಲ್ಲಾ ಕೊಟ್ಟಳೆನ್ನಬಹುದು.

"ಅಲ್ರೀ! ಆ 4,5 ಇದ್ದಾರಲ್ಲಾ ಅವರಿಗೆ"----

"ಆ 4,5"ನಾನು ಘಾಬರಿಯಾಗಿ ಕೂಗಿದೆ. ಒಳ್ಳೆ ಕೈದಿಗಳಂತೆ ನಂಬರುಗಳು.

"I am sorry. ನಾನು ಮೊದ್ಲೇ ಹೇಳ್ಬೆಕಾಗಿತ್ತು. ನಾವು ಒಬ್ಬರನ್ನೊಬ್ಬರು refer ಮಾಡೋದು flat ನಂಬರಿನಿಂದ. ನೋಡಿ 4.5 ಅಂದ್ರೆ 4th floor, 5th house ಅಂತಾರೀ'' ಎಂದು explain ಮಾಡಿ ಮುಂದುವರೆದಿದ್ದಳು. ಅವರು Mrs. ರಾವ್ ಅಂತ. ನೋಡ್ರಿ ಒಳ್ಳೆ ಚಿಕ್ಕ ಹುಡುಗಿಯ ಹಾಗೆ ಡ್ರೆಸ್ ಮಾಡ್ಕೊತಾಳೆ. ಅವಳಿಗೆ 13 ವರ್ಷದ ಹುಡುಗಿ ಇದ್ದಾಳೆ. ಥೂ ಅಸಹ್ಯ!'' ತನ್ನ ಉದ್ದದ ಬಣ್ಣ ಬಳಿದ ಉಗುರಿನಿಂದ ಅಲೆಮಾರಿ ಲಂಗದ ಕನ್ನಡಿಯನ್ನು ಕೆರೆಯುತ್ತಿದ್ದಳು.

"ಹೌದು! ನೀನೇನು ಕಮ್ಮಿ! ಹತ್ತು ವರ್ಷದ ಮಗಳಿದಾಳೇಂತಿ! ನಿನ್ನ ಮಗಳ ಬರೋಬರೀನ ಡ್ರೆಸ್ ಮಾಡಿದ್ದೀಯಲ್ಲಾ'' ಅಂದ್ಕೊಂಡೆ. (ಎಲ್ಲಾ ಸ್ವಗತ) ಅಷ್ಟೆ.

"ಅಯ್ಯೊ! ನೀವು ಬಿಡೀಪ್ಪ! ಗೊತ್ತೇ ಆಗೊಲ್ಲ ನಿಮಗೆ ಹನ್ನೆರಡು ವರ್ಷದ ಮಗಳಿದಾಳೇಂತ! ಒಳ್ಳೆ ನಿಮಗೆ ಇಪ್ಪತ್ತು ವರ್ಷದ ಮೇಲೆ ಕಾಣೋಲ್ಲಾರಿ'' ಎಂದಳು.

ಉಬ್ಬಿಹೋದೆ. ಬಲು ಖುಷಿಯಾಯ್ತು. ಹುಲು ಮಾನವಳಾದ ನಾನು ಅಂಥ complimentsಗೆಲ್ಲಾ ಉಬ್ಬೊದರಲ್ಲೇನಾಶ್ಚರ್ಯ. ಸಾಕ್ಷಾತ್ ಪರಮಾತ್ಮನೇ ತನ್ನನ್ನು ಪ್ರಾರ್ಥಿಸುವವರಿಗೆ ಸಕಲ ಸುಖವನ್ನೂ ಕೊಡುತ್ತಾನಂತೆ. ಹಾಗೆ ಅವಳು ಓಗೊಟ್ಟಲ್ಲಿ ನಾನಿರಹತ್ತಿದೆ. ಹೀಗೆ ಆಫೀಸ್‌ಗೆ ಒಟ್ಟಿಗೆ (ಇಬ್ಬರದ್ದೂ ಹತ್ತಿರದ ಬೇರೆ ಬೇರೆ ಆಫೀಸ್‌ಗಳು) ಮಾರ್ಕೆಟ್ಟಿಗೆ ಒಟ್ಟಿಗೆ, ಕೊನೇಲಿ ಮನೇಲೂ ಒಟ್ಟಿಗೇನೇ.

ಅದ್ರೆ ಇತ್ತೀಚೆಗೆ ಕೊಂಚ ದಿನಗಳಿಂದ ಯಾತಕ್ಕೊ ಇಬ್ಬರ ಮಧ್ಯೆ ಒಂದು ತರಹಾ ಶೀತಯುದ್ಧ ಆರಂಭವಾಗಿತ್ತು.

"ಏನೇ! ನಿನ್ನ 3,2 ಕ್ಕೆ ಏನಾಗಿದ್ಯೆ? ಯಾತಕ್ಕೇ ಇತ್ತೀಚೆಗೆ ನೀನು ಪೂರ್ವವಾದರೆ ಅವರು ಪಶ್ಚಿಮ?'' ಅಂತ ಕೇಳಿ ನನ್ನ ಉತ್ತರಕ್ಕಾಗಿ ಕಾಯದೆ "ಅದಕ್ಕೇ ಹೇಳೋದು ಗಾದೆ ಎರಡು ಜಡೆ, (ಈಗ ಬಾಬ್‌ಕಟ್ ಅನ್ನು) ನೂರು ಜುಟ್ಟಿನ ಗಾದೆ. ಸಧ್ಯ! ಒಳ್ಳೆದಾಯ್ತು. ಈಗಾದ್ರೂ ಅಷ್ಟು ಮನೆಕಡೆ ಗಮನಕೊಡು. ನೋಡು! ನಾವೆಲ್ಲ ಎಷ್ಟು ಸಣ್ಣಗಾಗಿ ಬಿಟ್ಟಿದ್ದೇವೆ'' ಅಂತ ತಮ್ಮ ಪಾಂಚ್ ಮೇಲೆ ಕೈ ಆಡಿಸಿಕೊಂಡರು ನಮ್ಮ ಯಜಮಾನರು.

ಶೀತಲ ಯುದ್ಧದ ಕಾರಣವೇನು ಕ್ಷುಲ್ಲಕ ಎನ್ನುತ್ತೀರಾ! ಇಲ್ಲ! ಖಂಡಿತಾ ಇಲ್ಲ!

ಅವತ್ತು ಆಫೀಸಿನಲ್ಲಿ ಕೊಂಚ ಲೇಟಾದ ಕಾರಣ ಮನೆ ತಲುಪುವ ಹೊತ್ತಿಗೆ ಕತ್ತಲಾಗಿತ್ತು. Lift ಮೇಲಿದ್ದ out of order ಬೋರ್ಡ್ ಕಂಡು ನಿಧಾನವಾಗಿ ಮೆಟ್ಟಲು ಹತ್ತಿ ಹೋಗುತ್ತಿದ್ದೆ. ಆವಾಗ ಪಕ್ಕದ flat ನ ಅರ್ಧ ತೆಗೆದ ಬಾಗಿಲಿಂದ ಕೇಳಿ ಬಂತು. "ನೋಡ್ರೀ! ಇದಾಳಲ್ಲಾ ಆ 4, 2----'' ನನ್ನ ಕಿವಿ ನೆಟ್ಟಗಾಯ್ತು'' ಅಲ್ಲೇ ನಿಂತೆ ಶಬ್ದ ಮಾಡದೆ. ಮುಂದೇನು ಬರುತ್ತೊಂತಾ! ಯಾಕೇಂದ್ರೆ 4,2 ಅಂದ್ರೆ ನಾನೇ, yours truly. ಆಮೇಲೆ ಬಂತು ನೋಡಿ ಒಳ್ಳೆ ಭಾರಿ ಪೆಟ್ಟು---''

ಅವಳು ಡ್ರೆಸ್ ಮಾಡೋದು ನೋಡ್ರಿ! ತಾನೇ ಹರೆಯದ ಹುಡುಗಿ ಅನ್ನೋತರಹ. ನಂಗೇನೋ ಅವಳನ್ನ ನೋಡಿದ್ರೇ 40ರ ಮೇಲಾಗಿದೆ--- --- ಮುಂದೆ ಕೇಳದಾವೆ. ಇದು ಬಂದದ್ದು ಆ ರಾಜಸ್ಥಾನಿ ಅಲೆಮಾರಿ ಲಂಗದ 3, 2 ರಂದ. ಇವಳು ನನ್ನ ಆಪ್ತ ಸ್ನೇಹಿತೆಯಂತೆ. ಓಡಿ ಹೋಗಿ ಅವಳನ್ನು ತದುಕಿ ಬಿಡುವಷ್ಟು ಕೋಪ ಬಂತು. ಕೋಪ ತಡೆದುಕೊಂಡು ಹೇಗೋ ಮನೆಗೆ ಬಂದು ಸೇರಿದ್ದೆ. ಅದೇ ಕೊನೆ. ನಾನು, ಅವಳೂ ಮಾತಾನಾಡಿದ್ದು.

ಎಂದಿನಂತೆ ಆ ದಿನವೂ ಒಂದೇ ಸಮಯಕ್ಕೆ ಆಫೀಸಿಗೆ ಹೊರಟಿದ್ದೆವು. ಆದರೆ ದೂರದೂರವಾಗಿ ಒಬ್ಬರ ಮುಖವನ್ನೊಬ್ಬರು ನೋಡದೆ ಹೋಗುತ್ತಿದ್ದೆವು. ಎಷ್ಟೋ ಹೊತ್ತು ಕಾದ ಬಳಿಕ ಬಸ್ಸೂ ಬಂತು. ಯಥಾ ಪ್ರಕಾರ ಕೊಕ್ಕರೆ ತರಹ ಒಂದೇ ಕಾಲು ಸರಿಯಾಗಿ ಊರುವಷ್ಟು ಸ್ಥಳ ಸಹ ದೊರಕಿತು. ಅಷ್ಟರಲ್ಲಿ ಚಿತ್ರಾನೂ ಕಣ್ಣಿಗೆ ಬಿದ್ದಳು. ಅವಳ ಕಣ್ಣುಗಳು ನನ್ನ ಕಣ್ಣುಗಳನ್ನು ಸಂಧಿಸಿದಾಗ ನಾನು ಆ ಕಡೆ ತಿರುಗಿಬಿಟ್ಟೆ. ಯಾಕೋ ಅವಳು ನನ್ನ ಕಂಡು ಮುಸಿ ಮುಸಿ ನಗುತ್ತಿದ್ದಾಳೆ ಎನ್ನಿಸಿತು. "ಹಾಳಾಗಿ ಹೋಗ್ಲಿ! ನನಗೇನೂ" ಎಂದು ಗೊಣಗಿಕೊಂಡೆ! ಬಸ್ ನಿಧಾನವಾಗಿ ಮುಂದುವರೆಯುತ್ತಿತ್ತು. ಕೆಲವು ಸೀಟುಗಳು ಖಾಲಿಯಾಗ್ತಾಯಿದ್ವು. ಕೆಲವು ತುಂಬ್ತಾಯಿದ್ವು. ನಾನು ಕಿಟಕಿಯಿಂದ ಹೊರಗೆ ನೋಡ್ತಾ ಯೋಚಿಸ್ತಾಯಿದ್ದೆ. ಏನೋ ಏನು! ಆ ಹಾಳು ಚಿತ್ರಳ ಬಗ್ಗೇನೇ! ಇದ್ದಕ್ಕಿದ್ದಂತೆ ಕಿವಿಗೆ ಅಪ್ಪಳಿಸಿದಂತೆ ಬಂದಿತು. "ಅಯ್ಯೋ! ಆ ಅಂಟೀನ ಕೂರ್ಸಿ ಬಿಡೀಪ್ಪಾ! ತುಂಬಾ ಸುಸ್ತಾಗಿ ಕಾಣ್ತಾಯಿದ್ದಾರೆ! ಪಾಪ! ವಯಸ್ಸಾದೋರು. ಬಿದ್ಬಿಟ್ಟಾರೂ!" ಅದು ಚಿತ್ರಾಳ ಧ್ವನಿ. ತಕ್ಷಣ ಆ ಕಡೆ ತಿರುಗಿದೆ ಅಷ್ಟೆ. ಅಷ್ಟರಲ್ಲಿ ಯಾರೋ ಕೈ ಹಿಡಿದೆಳೆದು, "ಕೂತ್ಕೊಳ್ಳಿ ಅಂಟಿ! ನೀವ್ಯಾಕೆ, ಪಾಪ, ನಿಂತ್ಕೋಬೇಕು! ಏನಾದ್ರೂ ಹೆಚ್ಚು ಕಡ್ಮೆ ಆಗ್ಬಿಟ್ರೆ? ಅಂತ ಯಾರನ್ನೋ ಎಬ್ಬಿಸಿ ತಕ್ಷಣ ನನ್ನ ನೂಕಿ ಕೂರ್ಸಿ ಬಿಟ್ರು. ನನಗೆ ಮಾತನಾಡಲಿಕ್ಕೆ ಅವಕಾಶವೇ ಕೊಡಲಿಲ್ಲ. ಕೂತ್ಕೊಳ್ಳೋಕೆ ಮೊದಲು ಅರೆಕ್ಷಣ ಅವಳನ್ನು ಕಂಡೆ, ಕಂಡು ಹಲ್ಕಡಿದೆ, ದುರುದುರು ನೋಡಿದೆ ಅಷ್ಟೆ! ಅಷ್ಟರಲ್ಲಿ ಮಾನವ ಕೋಟೆ ಸುತ್ತುವರೆದು ಬಿಟ್ಟಿತು.

ಆಫೀಸಿನ ದಿನವೆಲ್ಲಾ ಹಾಳು! ಸಾಯಂಕಾಲ ಮನೆಗೆ ಬಂದ ಮೇಲೂ mood off ಆಗೇ ಇತ್ತು. ಕನ್ನಡಿ ಮುಂದೆ ಕೂತು laughing lines ನ depth ಅಳೀತಾ ಜೋರಾಗಿ ಗೊಣಗಿದೆ. "ಹೌದು! ನಾನೂ ಅನ್ಬೇಕಾಗಿತ್ತು  ನನ್ನನ್ಯಾಕೆ? ಆ ಅಜ್ಜೀನೇ ಕೂರ್ಸಿ" ಅಂತ. ನನಗ್ಯಾವಾಗ್ಲೂ ಹಾಗೇನೇ---ಯಾರನ್ನಾದ್ರೂ ಏನಾದ್ರೂ ಹೀಗೆ retort ಮಾಡ್ಬೇಕಾಗಿತ್ತೂ ಅಂತ ಹೊಳೆಯೋದು ಎಷ್ಟೊ ಹೊತ್ತಾದ್ಮೇಲೆ. ಅಷ್ಟು ಹೊತ್ತಿಗೆ ಅಲ್ಲಿಗೆ ಬಂದ ಇವರು "ಏನೇ! ಯಾರನ್ನ ಏನನ್ಬೇಕಾಗಿತ್ತು! as usual ಹೀಗನ್ಬೇಕಾಗಿತ್ತು, ಹಾಗನ್ಬೇಕಾಗಿತ್ತು ಅಂತ ನಿನಗೆ ಈಗ ಹೊಳೀತಾಯಿದೆ ತಾನೆ? ಅಂದ್ರು. ಮಾತಾಡ್ದೆ ಕೈಗೆ ಸಿಕ್ಕ ಪೌಡರ್ ಡಬ್ಬಿಯನ್ನೇ ಅವರ ಕಡೆಗೆ ಎಸೆದೆ.

ಅವತ್ತಿನಿಂದ ಇವತ್ತಿನವರೆಗೂ ಆ ಬಸ್‌ನ usual ಕಮ್ಯೂಟರ್ಸ್‌ಗೆಲ್ಲಾ ನಾನು ಆಂಟಿನೇ– ಅಂದೇ ನನ್ನ ಓರಿಗೆಯ ಚಿತ್ರಾ– ಚಿತ್ರಾನೇ– ಕೆಲವು ಸರ್ತಿಯಂತೂ Miss. ಚಿತ್ರಾ ಸಹ.

ಹಾಳಾದ್ದು ಆ ಬಸ್‌ನೇ ಬಿಟ್ಟು ಬಿಡೋಣ ಅಂದ್ಕೋತೀನಿ. ಆದರೆ ಅದರ ಸರ್ವಿಸ್ ಮುಕ್ಕಾಲು ಗಂ. ಗೆ ಒಂದು ಸತಿಯಂತೆ. ಇಲ್ದೆ ಇದ್ರೆ ಎರಡು ಬಸ್ ಬದಲಾಯಿಸಿ ಹೋಗ್ಬೇಕಾಗುತ್ತೆ! ಅನುಭವಿಸುತ್ತಾಯಿದ್ದೀನಿ ಈ ಪಟ್ಟನ್ನ.

ನಿಮ್ಮಲ್ಲಿ ಯಾರಾದ್ರೂ ಒಬ್ರು ಎಂದಾದರೂ ಒಂದು ದಿನ ಆ ಚಿತ್ರಳಿಗೆ seat ಕೊಟ್ಟು ನನಗುಂಟಾದ ಪರಿಸ್ಥಿತಿಯನ್ನ ಅವಳಿಗೆ ತಂದೊಡ್ಡಿದರೆ ಅವತ್ತು ನಾನು ಸುಖವಾಗಿ ಉಸಿರಾಡಬಲ್ಲೆ.



“ನದಿ ನೀರಿಗೆ ಈ ಪಾಟಿ
ಜಗಳ ಯಾಕೆ ಅಂತ
ನನಗಂತೂ ಅರ್ಥವಾಗಿಲ್ಲ”

# "ಅಪರಂಜಿ ಸ್ಕ್ಯಾಂಡಲ್"

–ನಂದಿನಿ ಕಾಪಡಿ

ಬೆಳ್ಳಂಬೆಳಗ್ಗೆ ಕರೆಗಂಟೆಯಾಯ್ತು. ಕಣ್ಣುಜ್ಜಿಕೊಳ್ಳುತ್ತಲೇ ಬಾಗಿಲು ತೆರೆದು ನೋಡಿದ್ರೆ ಯಾರೂಂತೀರಿ? ಬಣ್ಣ ಬಣ್ಣದ ಸೀರೆ ಉಟ್ಟು, ಮಣಿಹಾರ, ಕೊಂಬಿನ ಬಳೆಗಳನ್ನು ಹಾಕ್ಕೊಂಡು, ಕಾಲಿಗೆ ಗೆಜ್ಜೆ ಕಟ್ಕೊಂಡು, ಕೈಯಲ್ಲಿ ಒಂದು ಬಟ್ಟೆಯ ಗಂಟನ್ನೂ, ರೈಲು ಚೆಂಬನ್ನೂ ಹಿಡಿದುಕೊಂಡು ನಿಂತಿದ್ದಾಳೆ ಅಪರಂಜಿ. "ಇದೇನೇ ಅಪರಂಜಿ, ಹೀಗೆ ಹೇಳ್ದೆ ಕೇಳ್ದೆ ಬಂದು ಬಿಟ್ಟೆ" ಅಂತಾ ನಾನೂ ಒಡ್ಡು ಒಡ್ಡಾಗೇ ಪ್ರಶ್ನೆ ಕೇಳಿದೆ.

"ಅಯ್ಯೋ ಅದೆಲ್ಲಾ ಆಮೇಲೆ ಮಾತು. ಮೊದಲು ಒಳಗೆ ಕರಿ" ಎಂದವಳೇ ನನಗೂ ಕಾಯದೆ ಒಳಗೆ ಬಂದೇ ಬಿಟ್ಳು.

ಕಾಫಿಯಾಯ್ತು, ಸ್ನಾನವಾಯ್ತು, ತಿಂಡಿಯೂ ಆಯ್ತು. ನನ್ನ ಗಂಡ, ಮಕ್ಕಳು ಆಫೀಸು ಮತ್ತು ಸ್ಕೂಲಿಗೆ ಹೋಗುವುದನ್ನೇ ಕಾದಿದ್ದವಳಂತೆ ಅಪರಂಜಿ ತನ್ನ ಗಂಟು ಬಿಚ್ಚಿದಳು. "ನಿಮ್ಮಮ್ಮ ಕಳಿಸಿದ್ದು ಈ ಕೋಡುಬಳೆ ಮತ್ತು ರವೆಉಂಡೆ. ಈ ಗುಳಪಾವಟೆ ನಾನು ತಂದಿದ್ದು" ಎಂದು ತಿಂಡಿಗಳ ಪ್ಯಾಕೆಟ್ಟನ್ನು ನನ್ನ ಕೈಗೆ ಕೊಟ್ಟಳು.

"ಅಪರಂಜಿ, ಇದ್ದಕ್ಕಿದ್ದ ಹಾಗೆ ಬಂದ್ಯಲ್ಲೇ? ಏನು ಸಮಾಚಾರ? ಎಲ್ಲಾ ಸರಿಯಾಗಿದೆ ತಾನೆ?" ಎಂದು ಇನ್ನೊಮ್ಮೆ ಕುಕ್ಕಿ ಕೇಳಿದೆ.

"ಅಕ್ಕಾ ದೊಡ್ಡ ಕತೆ ಕಣೆ. ಕೂತ್ಕೋ ಬಾ ಎಲ್ಲಾ ಹೇಳ್ತೀನಿ" ಅಂದ್ಲು. ಅವಳ ಬಾಯಿಂದ್ಲೇ ಕೇಳಿ ಆ ಕತೆಯನ್ನು.

"ನಮ್ಮ ಪಕ್ಕದ ಮನೆ ಪಾತಕ್ಕ ಗೊತ್ತಲ್ಲಾ. ಇರುವ ಒಬ್ಬನೇ ಮಗ ಅಮೇರಿಕಾಗೆ ಹಸಿರು ಕಾರ್ಡು ಅಂತಾ ಏನೋ ಹೇಳ್ತಾರಲ್ಲಾ ಅದನ್ನ ತೆಗೆದುಕೊಂಡು ಹೊರಟು ಹೋದ್ಮೇಲೆ ಹಾಯಾಗಿರ್‍ತಿದ್ರು. ಆದ್ರೆ ಒಂದು ಸಲಾನಾದ್ರೂ ತಮ್ಮ ಮಗ ತಮ್ಮನ್ನು ಅಮೇರಿಕಾಗೆ ಕರಸ್ಕೊಳ್ಳಿಲ್ಲ ಅಂತ ಸ್ವಲ್ಪ ಬೇಜಾರೇ ಮಾಡಿಕೋತಿದ್ರು.

ಅಷ್ಟರಲ್ಲಿ ಅವರ ತಂಗಿ ಮಗಳು ಸೀಮಾ ದುಬೈನಿಂದ ಫೋನ್ ಮಾಡಿ ತನಗೆ ಇನ್ನೆರಡು ತಿಂಗಳಲ್ಲಿ ಮಗುವಾಗುವುದು. ನೀನು ಬಂದು ಬಾಣಂತನಕ್ಕೆ ಸಹಾಯ ಮಾಡ್ತೀಯಾ ಎಂದು ಕೇಳಿಕೊಂಡ್ಲಂತೆ.

ಸಿಕ್ಕದ್ದೇ ಛಾನ್ಸು ಅಂತ ಪಾತಕ್ಕ ಜುಮ್ಮಾಗಿ ಪಾಸ್‌ಪೋರ್ಟ್ ಮಾಡಿಸಿಕೊಂಡವರೇ ದುಬೈಗೆ ಹೋಗಲು ತುದಿಗಾಲಲ್ಲಿ ನಿಂತ್ರು. ಇವ್ರು ಅಲ್ಲಿ ಹೋಗಿ ಬಾಣಂತನ ಮುಗಿಸಿಕೊಂಡು ಬರುವಾಗ ಸೀಮಾ ಸೀರೆ, ರವಿಕೆ ಮತ್ತು ಹತ್ತು ಚಿನ್ನದ ಕಾಸುಗಳನ್ನು ಕೊಟ್ಲಂತೆ. ಪಾತಕ್ಕ ಬೆಂಗಳೂರಿಗೆ ಬಂದ ಮೇಲೆ

ನೆರೆಹೊರೆಯವ್ರಿಗೆಲ್ಲಾ ಆ ಚಿನ್ನದ ಕಾಸುಗಳನ್ನ ತೋರಿಸಿ ಹೆಮ್ಮೆ ಪಟ್ಟಿದ್ದೂ ಪಟ್ಟಿದ್ದೆ! ಅವರ ಆ ಬದಿಯ ಮನೆಯ ಸೀತಮ್ಮ ತಮ್ಮ ಮೇಲೆ ಕರುಬಿದ್ದನ್ನು ನೋಡಿ ಒಳಗೊಳಗೇ ಸಂತೋಷಾನೂ ಪಟ್ಕೊಂಡ್ರು.

ಆರು ತಿಂಗಳ ಮೇಲೆ ಸೀಮಾ ಮತ್ತೆ ಫೋನ್ ಮಾಡಿ ತಾನು ಕೆಲಸಕ್ಕೆ ಸೇರಿಕೊಂಡಿರುವುದರಿಂದ ಮಗುವನ್ನು ಬೇಬಿ ಸಿಟರ್ ಹತ್ರ ಬಿಡುತ್ತಿದ್ದೀನಿ ಎಂದ್ಲಂತೆ. ಪಾತಕ್ಕ ತಾವಿರುವಾಗ ಬೇಬಿ ಸಿಟರ್ ಯಾಕೆ ಬೇಕು. ಟಿಕೆಟ್ ಕಳಿಸಿದ್ರೆ ತಾವೇ ಬರೋದಾಗಿ ಹೇಳಿದ್ರಂತೆ. ಅವರಿಗೋ ಫಾರಿನ್ ಚಪಲ ಅಂತ ಜನಾ ಮಾತಾಡ್ಕೊಂಡ್ರು.

ಅವರು ಹೊರಡೋ ದಿನ ಎದುರು ಮನೆ ಸೇಠಮ್ಮ ಬಂದವಳೇ ಅವರ ಕೈಗೆ ಒಂದಷ್ಟು ಡಾಲರುಗಳನ್ನು ತುಂಬಿ ಬರೋವಾಗ ತಮಗೂ ಒಂದೈವತ್ತು ಬಂಗಾರದ ಕಾಸುಗಳನ್ನು ತರಬೇಕು ಎಂದು ಕೇಳಿಕೊಂಡ್ಲಂತೆ.

ದುಬೈನಲ್ಲಿ ಮೂರು ತಿಂಗಳಿದ್ದರು ಪಾತಕ್ಕ. ಅಷ್ಟರಲ್ಲಿ ಸೀಮಾಳ ಅತ್ತೆ ಬೆಂಗಳೂರಿಂದ ಬರುತ್ತಾರೆ ಎಂದು ತಿಳಿಯಿತು. ತಮ್ಮಿಂದೇನು ಕೆಲಸ ಅಂತ ಪಾತಕ್ಕ ಬೆಂಗಳೂರಿಗೆ ಬಂದರು. ಈ ಸರ್ತಿ ಬರೋವಾಗ ಸೇಠಮ್ಮನಿಗೆ ಐವತ್ತು ಕಾಸುಗಳಲ್ಲದೇ ಯಾರಿಗಾದರೂ ಮಾರಬಹುದು ಎಂದು ತಾವೂ ಸೀಮಾ ಕೊಟ್ಟ ಡಾಲರುಗಳಲ್ಲಿ ಒಂದಿಪ್ಪತ್ತು ಕಾಸುಗಳನ್ನು ಕೊಂಡರು.

ಸೇಠಮ್ಮ ಇವರ ಖರೀದಿ ನೋಡಿ ಆ ಇಪ್ಪತ್ತು ಕಾಸುಗಳನ್ನೂ ತನಗೇ ಕೊಡು ಎಂದು ಕೇಳಿ ಅದರ ಬೆಲೆಯನ್ನ ತಕ್ಷಣವೇ ಕೊಟ್ಟೂ ಬಿಟ್ಟಳಂತೆ. ಸೀತಮ್ಮ, ಅವರ ತಂಗಿ ಶಾಲಿನಿ, ಶಾಲಿನಿಯ ಅತ್ತೆ ಸುಂದರೂ ಎಲ್ರೂ ಪಾತಕ್ಕನಿಗೆ ದುಂಬಾಲು ಬಿದ್ದು ತಮಗೂ ಒಂದೊಂದು ಕಾಸು ಮಾರಲು ಕೇಳಿಕೊಂಡಾಗ ಸೀತಮ್ಮನಿಗೆ ಅಯ್ಯೋ ಎನಿಸಿ ತಮ್ಮ ಹತ್ತಿರ ಮೊದಲಿನಿಂದಿದ್ದ ಹತ್ತು ಕಾಸುಗಳಲ್ಲಿ ಐದನ್ನು ಮಾರೇ ಬಿಟ್ಟರು. ಬೇಕಾದಷ್ಟು ಲಾಭವೂ ಆಯ್ತಂತೆ!

ಸೀಮಾಳ ಅತ್ತೆ, ಸೊಸೆ ಜೊತೆ ಜಗಳ ಮಾಡಿಕೊಂಡು ಭಾರತಕ್ಕೆ ವಾಪಸು ಬಂದಾಗ ಪಾತಕ್ಕ ಮತ್ತೆ ಹೊರಟು ನಿಂತರು. ಈಗ ಅವರನ್ನು ಏರ್ ಪೋರ್ಟಿಗೆ ಕಳಿಸಲು ಬಂದವನು ಸೇಠಮ್ಮನ ಪತಿ ಚಂದೂಮಲ್ ಲಲ್ಲೂಮಲ್ ಸೇಠ್. "ಬೆಹನ್ ಜೀ, ನೀವು ಈ ಬಾರಿ ಬರುವಾಗ ದುಬೈನಲ್ಲಿ ನನ್ನ ಗೆಳೆಯ ನಿಮಗೊಂದು ಪಾರ್ಸಲು ಕೊಡುತ್ತಾನೆ. ಅದ್ರಲ್ಲಿ ಒಂದೆರಡು ಚಿನ್ನದ ಬಿಸ್ಕಿಟ್‌ಗಳನ್ನು ಇಟ್ಟಿರುತ್ತಾನೆ. ಇಲ್ಲಿ ಈ ಡಾಲರಿನ ಬಂಡಲನ್ನು ಕೊಡುತ್ತೇನೆ. ಅವನಿಗೆ ತಲುಪಿಸಿಬಿಡಿ. ಅಂದಹಾಗೆ ಈ ನೂರು ಡಾಲರುಗಳು ನಿಮ್ಮ ಖರ್ಚಿಗೆ ಮಾಡಿಕೊಳ್ಳಿ. ತಮ್ಮ ಕೊಟ್ಟಿದ್ದನ್ನು ಅಕ್ಕ ಬೇಡವೆನ್ನಬಾರದು" ಎಂದೆಲ್ಲಾ ಹೇಳಿದನಂತೆ. ಪಾಪದ ಪಾತಕ್ಕ ಒಪ್ಪಿಕೊಂಡೇ ಬಿಟ್ರು.

ಪಾತಕ್ಕನ ಬಂಗಾರದ ವ್ಯವಹಾರ ಪ್ರಾರಂಭವಾದದ್ದು ಹೇಗೆ. ಇಷ್ಟರಲ್ಲಿ ಸೀಮಾಗೆ ಇನ್ನು ದೊಡ್ಡ ಕೆಲಸವಾಗಿ ಸದ್ಯ ಪಾತಕ್ಕ ಆಗಾಗ್ಗೆ ಬರುತ್ತಿರುವ ಬಗ್ಗೆ ಸಂತೋಷವೇ ಆಯ್ತು. ಈಗ ಅವ್ರು ದುಬೈಗೆ ಹಳಬರಾದ್ರಿಂದ ತಮ್ಮ ಶಾಪಿಂಗ್

ತಾವೇ ಹೋಗಿ ಮಾಡುವರು. ಮಗುವನ್ನು ಪ್ರಾಮಿನಲ್ಲಿ ಕೂರಿಸಿಕೊಂಡು ಎಲ್ಲಾ ಕಡೆಯೂ ಅಲೆಯುವರು.

ಸೇಠನ ಮಿತ್ರನ ಸಲಹೆಯ ಮೇಲೆ ಈ ಸರ್ತಿ ಪಾತಕ್ಕ ಬಾಂಬೆಯ ಮೇಲೆ ಬರದೇ ನವದೆಹಲಿಯ ಮೇಲೆ ಬಂದರು. ಕಸ್ಟಮ್ ಅಧಿಕಾರಿ ಅವರ ಬ್ಯಾಗನ್ನು ಜಪ್ತಿ ಮಾಡಿ ನೋಡಿದರೆ ನಾಲ್ಕು ಕಂಚಿ ಸೀರೆಗಳು, ಎಂಟು ನೈಲಾನ್ಸೀರೆಗಳು, ಎರಡು ಬೆಡ್ ಶೀಟು ಮಾತ್ರ ಇದ್ದವಂತೆ. ಸೇಠನ ಗೆಳೆಯ ಕೊಟ್ಟಿದ್ದ ಬಾದಾಮಿ ಹಲ್ವಾದ ಪೆಟ್ಟಿಗೆ ಮಾತ್ರ ಭಾರವಾಗಿತ್ತು. ಈ ಮುದುಕಿ ಇನ್ನೇನು ತಂದೀತು ಎಂದುಕೊಂಡು ಅದಿಕಾರಿ ಬಿಟ್ಟುಬಿಟ್ಟನಂತೆ.

ಸೀಮಾಳ ಮಗುವಿನ ವರ್ಷದ ಹುಟ್ಟಿದ ಹಬ್ಬಕ್ಕೆ ಪಾತಕ್ಕ ಮತ್ತೆ ಹೊರಟರು. ಈ ಸರ್ತಿ ಸೇಠ್ ಅವರ ಹತ್ತಿರ ಪುಟ್ಟ ಪ್ಯಾಕೆಟ್ಟನ್ನು ಕೊಟ್ಟು "ಬೆಹನ್‌ಜೀ, ಇದನ್ನ ನಿಮ್ಮ ಸೀರೆಯ ಒಳ ಸೆರಗಿಗೆ ಹೊಲಿದುಕೊಂಡು ಬಿಡಿ. ಅಲ್ಲಿ ನನ್ನ ಗೆಳೆಯ ನಿಮ್ಮ ಮನೆಗೇ ಬಂದಾಗ ತೆಗೆದುಕೊಡಿ" ಎಂದ. ದುಬೈನಿಂದ ಬರುವಾಗ ಸೀಮಾಳಿಗೆ ವೇಳೆಯಿಲ್ಲವೆಂದು ಸೇಠನ ಮಿತ್ರನೇ ಇವರನ್ನ ವಿಮಾನ ಹತ್ತಿಸಲು ಬಂದನಂತೆ. "ಬೆಹನ್ ಜೀ ನಿಮ್ಮ ಕೂದಲಿನ ಗಂಟಿನ ಮೇಲೆ ಹಾಕಿಕೊಳ್ಳಲು ಒಂದು ನವೀನ ಮಾದರಿ ಹೇರ್ ಪೀಸ್ ಮಾಡಿಸಿದ್ದೇನೆ. ನನ್ನ ಅತ್ತಿಗೆಗೆ ಕೊಟ್ಟು ಬಿಡಿ. ಹೆ ಹೆ ಹೆ" ಎಂದು ನಕ್ಕು ಕಾರಿನಲ್ಲೇ ಅವರ ನಿಜವಾದ ಗಂಟಿನ ಮೇಲೆ ಇನ್ನೊಂದು ಭಾರವಾದ ಗಂಟನ್ನು ಹೇರಿಸಿದ. ಮುಜುಗರವಾದ್ರೂ ಪಾತಕ್ಕ ಒಪ್ಪಿಕೊಳ್ಳದೇ ಇರಲು ಸಾಧ್ಯವಿರಲಿಲ್ಲ.

ಈ ಸಲ ಪಾತಕ್ಕ ಬಂದದ್ದು ಗೋವಾದ ಮೇಲೆ. ಕಸ್ಟಮ್ ಅದಿಕಾರಿ ಕೇಳಿದರೆ ಕೊಡಿ ಎಂದು ಸೇಠನ ಮಿತ್ರ ಒಂದು ಸ್ಕಾಚ್ ವ್ಹಿಸ್ಕಿಯ ಬಾಟಲನ್ನೂ ಕೊಟ್ಟಿದ್ದ. ತಮ್ಮ ದುಡ್ಡಿನಲ್ಲೇ ಕೊಂಡ ವ್ಹಿಡಿಯೋ, ಟೇಪ್ ರೆಕಾರ್ಡರುಗಳನ್ನು ತೋರಿಸಿ ಅದರ ಮೇಲೆ ಡ್ಯೂಟಿ ಕೊಟ್ಟು ಹೊರಬರುವಾಗ ಮಹಿಳಾ ಕಸ್ಟಮ್ ಅಧಿಕಾರಿ "ಆಂಟಿ, ನಿಮ್ಮ ತಲೆಯ ಗಂಟು ಭಾರವಾಗಿರಬೇಕಲ್ಲವೆ?" ಎಂದಳಂತೆ.

"ನನ್ನ ತಂಗಿಯ ಮಗಳದಮ್ಮ, ಅವಳ ತಂಗಿಗೆ ಮದುವೆಯ ರಿಸೆಪ್ಷನ್‌ಗೆ ಹಾಕಲೆಂದು ಕಳಿಸಿದ್ದಾಳೆ. ಅಂದಹಾಗೆ ಕುಡಿಯುವ ನೀರು ಎಲ್ಲಿದೆಯಮ್ಮ ಎಂದು ಮೆದುವಾಗಿ ಕೇಳಿದಾಗ ಆಕೆ ಬೇರೆ ಮೀನಿಗಾಗಿ ಗಾಳ ಬೀಸಿಕೊಂಡು ಹೋದಳಂತೆ.

ಆದ್ರೆ ಪಾತಕ್ಕ ಸಿಕ್ಕಿಹಾಕಿಕೊಂಡದ್ದು ಬೆಂಗಳೂರಿನಲ್ಲೇ. ತಾವೇ ತೆಗೆದುಕೊಂಡು ಬಂದಿದ್ದ ಚಿನ್ನದ ಬಿಸ್ಕಿಟನ್ನು ಅಕ್ಕಸಾಲಿಗ ರಾಮಾಚಾರ್ಯನಿಗೆ ಮಾರಲು ಹೋದಾಗ ಮತ್ತು ಅದರ ಬಗ್ಗೆ ಜಗಳ ಮಾಡಿದಾಗ ಅವನಿಗೇನೋ ಸಂಶಯಬಂದು ತನ್ನ ಸೋದರಳಿಯ ವೆಂಕಟೇಶನ ಹತ್ತಿರ ಏನೋ ಹೇಳಿದನಂತೆ. ವೆಂಕಟೇಶನ ಭಾರೀ ದೋಸ್ತು ಸೀನ ಈಗ ಕಸ್ಟಮ್ ಅಧಿಕಾರಿಯಾಗಿದ್ದ. ಮಾರನೆಯ ದಿನ ಪಾತಕ್ಕನ ಮನೆ ಜಪ್ತಿ ಮಾಡಿದಾಗ ಕಳ್ಳತನ ಬಯಲಾಯ್ತು. ಸೇಠನ ಮನೆಗೆ ಇನ್‌ಕಮ್ ಟ್ಯಾಕ್ಸ್ ಜಪ್ತಿ ಮಾಡಲು ಬರುವರು ಎಂಬ ಸಂದೇಹದಿಂದ ಅವನು ತನ್ನ ಎಲ್ಲ ಸ್ವತ್ತನ್ನ ಪಾತಕ್ಕನ ಹತ್ತಿರವೇ ಇಟ್ಟುಕೊಳ್ಳಲು ಹೇಳಿದ್ದ.

''ಅಪರಂಜಿ ಸ್ಕ್ಯಾಂಡಲ್'' ಎಂಬ ಹೊತ್ತಿಗೆಯ ಮೇಲೆ ಸುದ್ದಿಯೋ ಸುದ್ದಿಯಾಯ್ತು. ಪಾತಕ್ಕ ''ಕೋಫೆಪ್ಲೇಸಾ ಕಾಯದೆಯಿಂದ ಬಂಧಿತರಾಗಿ ಈಗ ಸೆರೆಮನೆಯ ಕಂಬಿಯೆಣಿಸುತ್ತಿದ್ದಾರೆ. ಎಲ್ಲಿ ಬಂಗಾರ? ಎಲ್ಲಿ ಕಬ್ಬಿಣದ ಕಂಬಿಗಳು'' ಎಂದು ಅಪರಂಜಿ ತನ್ನ ಕಥೆ ಮುಗಿಸಿದಳು.

''ಅಪರಂಜಿ, ಇದಕ್ಕೂ ನಿಂಗೂ ಏನೇ ಸಂಬಂಧ?'' ಎಂದು ಪೆದ್ದು ಪೆದ್ದಾಗೆ ಕೇಳಿ ಬಿಟ್ಟೆ ನಾನು.

''ನನ್ನ ಹೆಸರು ಪೇಪರಿನಲ್ಲಿ ಹೀಗೆ ಬಂತಲ್ಲಾ, ಪೋಲಿಸರೇನಾದ್ರೂ ನನ್ಮೇಲೂ ಗುಮಾನಿಯಿಟ್ಟಿದ್ದಾರೆನೋ ಅಂತಾ ಅಂಜಿಕೊಂಡು ಬೆಂಗಳೂರಿನಿಂದ ಓಡಿ ಬಂದೆ. ನಾಲ್ಕು ದಿನ ಇದ್ದು ಹೋಗುತ್ತೀನಿ''ಎಂದಳು ಅಪರಂಜಿ. ಅವಳ ಮಣಿಸರಗಳ ಮಧ್ಯೆ ಏನೋ ಫಳ ಫಳ ಅಂತ ಹೊಳೆಯಿತು. ''ಏನೇ ಇದು'' ಎಂದು ಕೇಳೇ ಬಿಟ್ಟೆ.

''ಮೊನ್ನೆ ಪಾತಕ್ಕನ ಹತ್ತಿರ ಕೊಂಡಿದ್ದು ಕಾಸು'' ಎಂದು ಅಪರಂಜಿ ಹೇಳಿದ್ಲು. ನೋಡಿದ್ರೆ ಅಪಟ ಅಪರಂಜಿಯೇ!



ಬಂದ್ ನಂತರದ ಸ್ಕೂಲಿನ ಪಾಡು!

# ಉಗಾದಿಯ ಸಂದೇಶ

-ಆರತಿ

(ಯುವ ಗೃಹಿಣಿಯಿಂದ ಹಾಲಿನ ಪ್ಯಾಕೆಟ್ ತರುವಾತನಿಗೆ)



ಬೆಳಗಿನ ಮಬ್ಬು, ಗೇಟಿನ ಕಿಂಕಿಣಿ
ಕಾದಿಹೆ, ತವಕದೆ ಮನ ಸೋತು
ಯುಗಾದಿಯ ಈ ಶುಭ ದಿನದಂದು
ಅರುಹಲು ನಿನಗೆ ಕಿವಿ ಮಾತು
ಗುಂಗುರು ಕೂದಲ ಚೆಂದದ ತರುಣನೆ
ನಿನ್ನಯ ಉಡುಪದು ಠೀಕ್ ಟಾಕು
ಉಲಿಯುವೆ ತುಟಿಗಳ ಸನಿಹಕೆ ತಂದು
"ಇವತ್ತು ಮೂರು ಲೀಟರ್ ಬೇಕು"

# ಕಳೆದುಕೊಳ್ಳುವವರು

ಚಂಚಲಾವೇಣು

ಜೀವನದಲ್ಲಿ ನಾವು ಎಷ್ಟೋಬಾರಿ ಏನೇನನ್ನೋ ಕಳೆದುಕೊಂಡಿರ್ತೀವಿ, ಅದೃಷ್ಟ ಚೆನ್ನಾಗಿದ್ದರೆ ಕಳೆದುಹೋಗಿದ್ದ ವಸ್ತುಗಳು ಸಿಗುತ್ತದೆ, ಕೆಲವು ಕಳೆದುಹೋದುವೆಂದರೆ ಮತ್ತೆ ಸಿಗಲಾರದಂತಹವುಗಳು, ಸಾಮಾನ್ಯವಾಗಿ ಕಳೆದುಕೊಳ್ಳುವುದನ್ನು ಯಾರೂ ಇಷ್ಟಪಡುವುದಿಲ್ಲ. ನಮ್ಮ ಅರಿವಿಲ್ಲದೆ ಕಳೆದುಹೋಗುವಂತಹುದು ಆಯಸ್ಸು. ಇದು ಪ್ರಕೃತಿ ನಿಯಮ. ಕಳೆದು ಹೋಗಲೇಬೇಕು. ಇದೊಂದು ರೀತಿ ಕಳೆದುಕೊಳ್ಳುವಿಕೆಯಾದರೆ ಮತ್ತೊಂದು ವಿಧದ ಕಳೆದುಕೊಳ್ಳುವಿಕೆ ಇದೆ. ಅದೆಂದರೆ ಹಣ, ವಸ್ತುಗಳು ಇತ್ಯಾದಿ.. 'ಕಳೆದುಹೋದ ಹಣ ಸ್ಮಶಾನಕ್ಕೆ ಹೋದ ಹೆಣ' ಎರಡೂ ಮತ್ತೆ ಸಿಗಲ್ಲವಂತೆ, ಹಾಗೆ ಕಳೆದುಹೋದದ್ದು ಹೋಯ್ತು ಅಂತಾನೇ ಲೆಕ್ಕ, ಅವ್ಯಾವುದೂ ಮತ್ತೆ ಸಿಕ್ಕೋದಿಲ್ಲ.

ಇದಲ್ಲದೆ ಇನ್ನೂ ಒಂದು ರೀತಿ ಕಳೆದುಕೊಳ್ಳೋದು ಇದೇ ಅಂತ ಸುಬ್ಬು ಸಿದ್ಧಾಂತ ಇದೆ. ಅವನ ಹೇಳಿಕೆ ಅನುಭವದ ಪ್ರಕಾರ ನಗು, ಸ್ವಾತಂತ್ರ್ಯ, ಮಾನಸಿಕ ನೆಮ್ಮದಿ, ದೈಹಿಕ ಆರೋಗ್ಯ, ಆರಾಮ-ವಿರಾಮ, ಇವುಗಳೂ ಕಳೆದುಹೋಗುವುದಂತೆ. ಆದರೆ ಇವೆಲ್ಲವೂ ಕಳೆದುಹೋಗುವುದು ಬದುಕಿನ ಉತ್ತರಾರ್ಧದಲ್ಲಿ ಅಂದರೆ ವಿವಾಹ ನಂತರ ಅಂತೆ. ಸುಬ್ಬುವಿನ ಗೆಳೆಯರೆಲ್ಲ ಬೇಕುಬೇಕಾದಂತೆ ಏನೇನನ್ನೋ ಕಳೆದುಕೊಂಡಿದ್ದಾರೆ, ಹಾಗೆ ಆ ಕಳೆದುಕೊಂಡಿರುವುದನ್ನು ಬೇರೆ ಬೇರೆ ರೀತಿ ಗಳಿಸಿಕೊಂಡೂ ಇದ್ದಾರೆ. 'ಇದುವರೆಗೂ ನೀನು ಏನೇನು ಕಳ್ಕೊಂಡಿದ್ದೀ ಸುಬ್ಬೂ... ಅಂತ ಅವರುಗಳು ಕೇಳಿದರೆ

'ಹುಟ್ಟೋವಾಗ ತಾಯೀನ್ನ ಕಳ್ಕೊಂಡೆ, ಬೆಳೀತಾ ತಂದೇನ್ನ, ಕೆಲಸ ಸಿಕ್ಕ ಮೇಲೆ ಅಜ್ಜೀನ್ನ.. ನಂತರ ಮದ್ವೆಯಾದ ಮೇಲೆ ನನ್ನನ್ನೇ ಕಳ್ಕೊಂಬಿಟ್ಟೆ, ಹೆಚ್ಚುಕಮ್ಮಿ ಜೇಬು ಖಾಲಿಯಾಗಿರುತ್ತೆ. ಆದ್ದರಿಂದ ಹಣ ಇದುವರೆಗೂ ಕಳೆದುಕೊಂಡಿಲ್ಲ, ಹೀಗಾಗಿ ನನ್ನ ಹತ್ತಿರ ಕಳ್ಕೋಗೋ ವಸ್ತುಗಳು ಇಲ್ಲವೇ ಇಲ್ಲ...

ಎನ್ನುವಂತಹ ಜಾಣ್ಮೆಯ ಉತ್ತರ ಸುಬ್ಬನಿಂದ ಬರುತ್ತದೆ.

ಅವನ ಚಿಕ್ಕಂದಿನ ಶಾಲಾದಿನಗಳಲ್ಲಿ ಸಹಪಾಠಿಗಳು ಪೆನ್ನೋ, ಪೆನ್ಸಿಲ್ಲೋ, ಪುಸ್ತಕವೋ ಕಳ್ಕೊಂಡು ಅಳ್ತಿದ್ದರೆ ಇವನು ತನ್ನ ವಸ್ತುವೇ ಕಳೆದುಹೋದಂತೆ ದುಃಖಿಸುತ್ತಿದ್ದ, ಹಾಗು ಆ ವಸ್ತುಗಳನ್ನು ಹುಡುಕಿಕೊಡುವುದರಲ್ಲಿ ಅವರಿಗಿಂತ ಹೆಚ್ಚಿನ ಆಸ್ಥೆ ವಹಿಸುತ್ತಿದ್ದ. ಅದೇ ಗೆಳೆಯರು ಲೆಕ್ಕದಲ್ಲಿ ಮುಂದಿರುತ್ತಿದ್ದರೆ ಇವನು ಎಂದೂ ಹಿಂದೆ.ಆ ಕೂಡೋದು, ಕಳೆಯೋದು ಎಲ್ಲಾ ಈ ಮಂಡೆಗೆ ಅರ್ಥವಾಗೋದಲ್ಲ ಎಂದು ಲೆಕ್ಕವನ್ನು ಎಂದೂ ಲೆಕ್ಕಕ್ಕಿಟ್ಟಿರಲಿಲ್ಲ.

ತನ್ನ ವಿಷಯ ಹೇಗೇ ಇದ್ದರೂ ಅವನಿಗೆ ಬೇರೆಯವರು ಕಳೆದುಕೊಂಡೆ ಅಂತ ಹೇಳುವ ವಿಷಯವೇ ಕುತೂಹಲ ಹುಟ್ಟಿಸುತ್ತಿತ್ತು, ದಿನನಿತ್ಯದ ಪೇಪರಿನಲ್ಲಿ ಬರುವ 'ನಾಯಿ ಕಾಣೆಯಾಗಿದೆ' 'ಕಳೆದ ವಸ್ತು ಹುಡುಕಿಕೊಟ್ಟವರಿಗೆ ಬಹುಮಾನವಿದೆ' ಇತ್ಯಾದಿ ಪ್ರಕಟಣೆಗಳು ಅವನ ಕುತೂಹಲ ಕೆರಳಿಸುತ್ತಿತ್ತು. ತನಗೆ

ಆ ವಸ್ತುಗಳೋ, ವ್ಯಕ್ತಿಯೋ ಅಥವಾ ನಾಯಿಯೋ ಸಿಗಬಾರದೇ ಎಂದು ಹಂಬಲಿಸುತ್ತಿದ್ದ.

ಒಮ್ಮೆ ಸುಬ್ಬು ಗೆಳೆಯನೊಂದಿಗೆ ಹೋಗುವಾಗ ಆತ ತನ್ನೆದುರು ಬರುತ್ತಿರುವಾತನನ್ನು ತೋರಿಸಿ 'ನೋಡು ಹೋದ ತಿಂಗಳು ತಾನೇ ಹೆಂಡ್ತೀನ ಕಳ್ಕೊಂಡು ದುಃಖದಲ್ಲಿದ್ದಾನೆ ಮಾತಾಡ್ಸಿ ಬರೋಣ ಬಾ' ಎಂದಾಗ ಯಾವುದೋ ಜ್ಞಾನದಲ್ಲಿದ್ದ ಸುಬ್ಬು

'ಹಾಗಾದ್ರೆ ಪೋಲೀಸರಿಗೆ ತಿಳ್ಸಿದ್ದಾರೆ ತಾನೆ?' ಎಂದು ಕೇಳಿದ್ದ, ಕಳೆದುಹೋಗುವುದನ್ನೆಲ್ಲಾ ಪೋಲೀಸರೇ ಹುಡುಕಿಕೊಡುತ್ತಾರೆ ಎಂಬ ನಂಬಿಕೆಯಲ್ಲಿ.

ಮನೆಯಲ್ಲಿ ಹೆಂಡತಿ ಸುಬ್ಬಿ 'ರೀ ಎದುರುಮನೆಯಾತ ರೇಸಿಗೆ ಹೋಗ್ತಾನಂತೆ ಅದ್ರಲ್ಲಿ ಆತ ಬೇಕಾದಷ್ಟು ಆಸ್ತಿಪಾಸ್ತಿ ಎಲ್ಲಾ ಕಳ್ಕೊಂಡಿದ್ದಾನಂತೆ ಕಣ್ರೆ' ಎಂದೆಲ್ಲಾ ಬಣ್ಣಿಸಿದಾಗ ಸುಬ್ಬುವಿಗೆ ತನಗಿಲ್ಲದ್ದು ಆತನಿಗೂ ಈಗ ಇಲ್ಲದಂತಾಯಿತು ಎಂಬ ಸಮತಾ ಭಾವನೆ ಬಂದು ಹಿಗ್ಗಾಯಿತು. ಅದೇ ಖುಷಿ ಮನೆಕೆಲಸದ ಕೆಂಪಿ

'ನನ್ಗಂಡ ಜೂಜಾಡೀ ಆಡೀ ಬರೋ ಅಣಾ ಎಲ್ಲಾ ಕಳೆದ್‌ಬುಡ್ತಾನೆ ಕಣವ್ವ,

ಮಿಕ್ಕ ಚೂರುಪಾರು ಎಲ್ಲಾ ಆ ನನ್ ಸವತಿ ರುದ್ರಿಗೆ ತಕೊಂಡು ಹೋಗಿ ಸುರೀತಾನೆ ಕಣವ್ವ' ಅಂತ ಅಮ್ಮಾವ್ರ ಮುಂದೆ ಗೋಳಾಡುವಾಗ ಸಿಗ್ತಿರಲಿಲ್ಲ, ಆಗ ಆಕೆ ಮೇಲೆ ಅನುಕಂಪ ಒಸರಿ ಬರುತ್ತಿತ್ತು.

'ಕಳ್ಕೊಂಡಿದ್ದನ್ನು ಕಳ್ಕೊಂಡ ಜಾಗದಲ್ಲೇ ಹುಡುಕಬೇಕಮ್ಮ' ಎಂದೇನೇನೋ ಕೆಂಪಿಗೆ ಅರ್ಥವಾಗದಂತಹ ತಿಳುವಳಿಕೆಯ ಮಾತಾಡಿ ಕೊನೆಗೆ

'ನಾನೇನಾದ್ರೂ ಸಹಾಯ ಮಾಡಲೇ ಕೆಂಪಮ್ಮಾ.. ಅಂತ ಕೇಳಿದಾಗ ಸುಬ್ಬಿ ಗಂಡನನ್ನು ಸೀದಾ ರೂಮಿಗೆ ದಬ್ಬಿದ್ದಳು ಕೋಪದಿಂದ, ಕೆಂಪಿ ಜೊತೆ ಮಾತಾಡಿದ್ರೆ ಉರಿದುಬೀಳ್ತಾಳೆ ತಾನೇನೋ ಕಳ್ಕೊಂಡಂಗೆ. ಸುಬ್ಬು ಒಳಗೊಳಗೇ ಸುಬ್ಬಿ ಮೇಲೆ ಕಿಡಿ ಕಾರಿದ ಅಸಹಾಯಕತೆಯಿಂದ.

ತಲೆತಗ್ಗಿಸಿ ನಡೆಯೋದೊಂದು ಸುಬ್ಬು ಹವ್ಯಾಸ, ಅವನ ಗೆಳೆಯರು ಆ ಬಗ್ಗೆ ಎಷ್ಟೇ ರೇಗಿಸಿದ್ರೂ ಅವನು ನಿರ್ಲಿಪ್ತ.

'ಅದೇನು ಕುರಿ ತರಾ ತಲೆ ತಗ್ಗಿಸ್ತೀ. ತಲೆ ಎತ್ತಿ ನಡ್ಯೋ.. ಎಂದೂ

'ಅಮ್ಮಾವ್ರ ಎದ್ರಿಗೆ ತಗ್ಗಿಬಗ್ಗಿ ನಡೆದು ಅಭ್ಯಾಸ' ಎಂದು ಕುಹಕ ಮಾಡಿದರೂ ಸುಬ್ಬು ಮುಗುಳ್ನಗುತ್ತಿದ್ದ. ಅವನು ತಲೆತಗ್ಗಿಸಿ ನಡೀವಾಗ ಎಷ್ಟೋ ವಸ್ತುಗಳು ದಾರಿಯಲ್ಲಿ ಸಿಗುತ್ತಿತ್ತು, ಪೆನ್ನು, ದುಡ್ಡು, ಪರ್ಸು ಒಂದೇ.. ಎರಡೇ, ಒಂದು ಬಾರಿ ಚಿನ್ನದ ಉಂಗುರ ಕೂಡಾ ಸಿಕ್ಕಿತ್ತು, ತಲೆ ಎತ್ತಿ ಸುತ್ತ ಮುತ್ತ ನೋಡಿ ನಡೀತಿದ್ರೆ ಇವೆಲ್ಲ ಸಿಗುತ್ತಿತ್ತೇನು? ಎಂದೇ ಅವನು ತನ್ನ ಹವ್ಯಾಸಕ್ಕೆ ಚ್ಯುತಿ ತಂದುಕೊಳ್ಳುತ್ತಿರಲಿಲ್ಲ, ಒಮ್ಮೆ ಗೆಳೆಯನೊಂದಿಗೆ ಹೋಗುತ್ತಿದ್ದಾಗ ದಾರಿಯಲ್ಲಿ ಗೆಳೆಯನ ಕಾಲಮುಂದೆಯೇ ನೂರು ರೂಪಾಯಿ ನೋಟು ಬಿದ್ದಿತ್ತು, ಗೆಳೆಯ ಅದನ್ನು ಗಮನಿಸದೆ ಎದುರು ಬರುತ್ತಿರುವ ಹುಡುಗಿಯ ನೋಡುತ್ತಾ ಆ ನೋಟನ್ನು ಮೆಟ್ಟಿ ಮುಂದೆ ನಡೆದಾಗ ತಲೆತಗ್ಗಿಸಿ ಬರುತ್ತಲಿದ್ದ ಸುಬ್ಬುವಿನ ಕಣ್ ನೋಟಕ್ಕೆ ಆ ನೋಟು ಬಿದ್ದು ಅವ ಅದನ್ನು ಜೇಬಿಗಿಳಿಬಿಟ್ಟಿದ್ದು ನಷ್ಟ ಯಾರಿಗೆ?

ಒಟ್ಟಿನಲ್ಲಿ ಸುಬ್ಬುವಿಗೆ ಹಾದಿಬೀದಿಯಲ್ಲಿ ಸಿಕ್ಕ ವಸ್ತುಗಳು ಜಾಸ್ತಿಯಾದಂತೆ ಸುಬ್ಬಿಯ ಬಿರುನುಡಿಗಳೂ ಕೇಳುವುದು ಜಾಸ್ತಿಯಾಯಿತು. 'ಪಕ್ಕದ್ಮನೆ ಕಾಮಾಕ್ಷಿ

ಗಂಡ ಆಫೀಸಿನಿಂದ ಬರೋವಾಗ ಅಲ್ಲೇ ಫುಟ್‌ಪಾತಲ್ಲಿ ಮಾರ್‍ತಿದ್ದ ತರಕಾರಿ, ಅದೂ ಇದೂ ಅಂತ ಏನಾದ್ರೂ ತರ್‍ತಾರೆ.. ನೀವೋ ನಿಮ್ಮ ಕಣ್ಣಿಗೆ ಅದೆಲ್ಲಾ ಬೀಳೋದೇ ಇಲ್ಲ, ಹೋದಾಪುಟ್ಟ-ಬಂದಾಪುಟ್ಟ ಅಂತ ನೆಟ್ಟಗೆ ಆಫೀಸಿಗೆ ಹೋಗಿ ಬರ್‍ತೀರಾ. ಆ ಕಡೆ ಈ ಕಡೆ ಗಮನ ಹರಿಸಿ ಅವನ್ನೆಲ್ಲಾ ತರಬಾರದೆ?.. ಅಂತ ರೇಗುತ್ತಿದ್ದಳು, ಹಾಗೆಲ್ಲಾ ಕಣ್ಣಿಗೆ ಕಂಡದ್ದನ್ನು ತರ್‍ತಾ ಹೋದರೆ ಜೇಬು ತನ್ನ ತೂಕ ಕಳ್ಕೊಳತ್ತೆ ಅಂತ ತಿಳಿದಿದ್ದ ಸುಬ್ಬು ಸುಬ್ಬಿ ಸಿಡುಕಿಗೆ ಸುಮ್ಮನಿರುತ್ತಾನೆ.

ಒಂದು ಬಾರಿ ಇವನಿಗೆ ಪಾರ್ಕಲ್ಲಿ ಒಂದು ಹಳತಾದ ಲೆದರ್‌ಬ್ಯಾಗ್ ಸಿಕ್ತು, ಅದರೊಳಗೆ ರಸೀತಿ, ಸರ್ಟಿಫಿಕೇಟ್ಸ್, ಮಾರ್ಕ್ಸ್‌ಕಾರ್ಡ್ ಇತ್ಯಾದಿ ಆಫೀಸಿಗೆ ಸಂಬಂಧಪಟ್ಟ ಕಾಗದಗಳಿದ್ದುವು. ಪಾಪ ಈ ದಾಖಲೆ ಪತ್ರಗಳನ್ನು ಕಳೆದುಕೊಂಡು ವ್ಯಾಕ್ತಿ ಎಷ್ಟು ಪರಿತಪಿಸುತ್ತಿರುತ್ತಾನೋ ಎಂಬ ಸಂಕಟವಾಯಿತು ಸುಬ್ಬುವಿಗೆ, ಆ ಬ್ಯಾಗ್‌ನೊಳಗೆ ಆ ವ್ಯಕ್ತಿಯ ಪಕ್ಕದ ಹಳ್ಳಿಯ ವಿಳಾಸದ ಚೀಟಿಯೂ ಸಿಕ್ಕಿತು. ಪೇಪರಲ್ಲಿ ಪ್ರಕಟಣೆ ಬರುವ ಮುಂಚೆ ನಾನೇ ಅಲ್ಲಿಗೆ ಹೋಗಿ ತಲುಪಿಸಿ ಒಂದು ಪುಣ್ಯ ಕಟ್ಟಿಕೊಂಡು ಬಹುಮಾನ ಗಿಟ್ಟಿಸುವಾ ಎಂದುಕೊಂಡು ಸುಬ್ಬು ಆ ಹಳ್ಳಿಯ ಬಸ್ ಏರಿದ, ಮೈಕೈ ನುಜ್ಜಾಗುವಂತಹಾ ಪ್ರಯಾಣ ಅದೂ ಸ್ಟ್ಯಾಂಡಿಂಗ್.. ಧೂಳು, ಬೆವರಿನಿಂದ ಮೈ ಕೊಳಕಾಗಿ ಆಯಾಸದಿಂದ ಸೋತುಹೋದರೂ ಸುಬ್ಬು ಅಳಿದುಳಿದ ಉತ್ಸಾಹ ತಂದುಕೊಂಡು ಆ ವ್ಯಕ್ತಿಯ ಮನೆಯರಸಿ ಹೊರಟ, ಆ ವ್ಯಕ್ತಿಯೂ ಸಿಕ್ಕ, ಕೂಡಲೇ ಅತ ಸುಬ್ಬುವಿನ ಕೈಯಿಂದ ಆ ಬ್ಯಾಗ್ ಕಸಿದುಕೊಮಡು ಅದರೊಳಗೆಲ್ಲಾ ತಡಕಾಡಿ ಸುಬ್ಬುವನ್ನು ವಿಚಿತ್ರವಾಗಿ ನೋಡುತ್ತಾ ಒಳಗೆ ಕರೆದು ಕೂಡಿಸಿದ.

'ನೋಡಿ ಸಾರ್ ಆ ಬ್ಯಾಗ್ ಏನೋ ನಂದೇ, ಆ ಕಾಗದ ಪತ್ರಗಳೂ ನಂದೇ ಅವೆಲ್ಲ ಡೂಪ್ಲಿಕೇಟ್‌ಗಳು, ಅವು ಹಾಳಾಗಿದ್ರೂ ಪರ್ವಾಗಿರಲಿಲ್ಲ, ಆದರೆ ಆ ಬ್ಯಾಗಲ್ಲಿ 5 ಸಾವಿರ ಕ್ಯಾಶ್ ಇಟ್ಟಿದ್ದೆ, ಅದು ಮಾತ್ರ ಇಲ್ಲ ನೋಡಿ..'

ಎಂದಾಗ ಸುಬ್ಬುವಿಗೆ ಹೃದಯ ಬಾಯಿಗೆ ಬರಲಿಲ್ಲ ಅಷ್ಟೆ, ಗಾಭರಿಯಾಯಿತು.

'ಇಲ್ಲ ಸಾರ್ ಆ ಬ್ಯಾಗ್ ನಂಗೆ ಸಿಕ್ದಾಗ ಅದರಲ್ಲಿ ಹಣ ಇರಲಿಲ್ಲ.. ಎಂದು ಇಷ್ಟು ಸಾರಿ ಹೇಳಿದರೂ ಆ ವ್ಯಕ್ತಿ ನಂಬುವಂತೆ ಕಾಣಲಿಲ್ಲ, ಮುಖ ಹುಳ್ಳುಳ್ಳಗೆ ಮಾಡುತ್ತಾ ಸುಬ್ಬುವನ್ನು ಅನುಮಾನದಿಂದಲೇ ದೃಷ್ಟಿಸುತ್ತಿದ್ದ, ನೂರೆಂಟು ಪ್ರಶ್ನೆ ಹಾಕುತ್ತಿದ್ದ, ಆದಷ್ಟು ಬೇಗ ಈ ವ್ಯಕ್ತಿಯ ಹಿಡಿತದಿಂದ ಪಾರಾಗಿಬಿಟ್ಟರೆ ಸಾಕು ಎಂದುಕೊಂಡು ಸುಬ್ಬು, ತಾನೇಕೆ ಈ ವ್ಯವಹಾರಕ್ಕೆ ಕೈ ಹಾಕಿದೆನೋ ಎನ್ನಿಸಿಬಿಟ್ಟಿತು, ಪೋಲಿಸ್ ಕೈಯಿಂದ ಕಳ್ಳ ತಪ್ಪಿಸಿಕೊಂಡಂತೆ ಸುಬ್ಬು ಅಲ್ಲಿಂದ ಮೆಲ್ಲನೆ ಬಿಡಿಸಿಕೊಂಡು ಬರುವಷ್ಟರಲ್ಲಿ ಸಾಕಾಗಿಹೋಗಿತ್ತು. ಜೊತೆಗೆ ಆ ವ್ಯಕ್ತಿಯಿಂದ ಬಹುಮಾನ ಹೋಗಲಿ ಕಪ್‌ಕಾಫಿ ಹೋಗಲಿ ಕಡೇಪಕ್ಷ ಥ್ಯಾಂಕ್ಸ್ ಕೂಡಾ ಸಿಗದೆ ಸಿಕ್ಕ ಅನುಮಾನದ ಅವಮಾನಕ್ಕೆ ಮುಖದಲ್ಲಿ ಮೂಡುತ್ತಿತ್ತು ಪೆಚ್ಚು ಕಳೆ.

# ಮೇರಾ ಭಾರತ್ ಮಹಾನ್

-'ಮನು'

ಸ್ನೇಹಿತರೇ, ಭಾರತೀಯರೇ, ದೇಶಬಾಂಧವರೇ,

ನಿಮ್ಮ ಜೊತೆ ಕೆಲವು ಕ್ಷಣಗಳ ಕಾಲ ಮಾತನಾಡಲು ಕುಳಿತಿದ್ದೇನೆ. ನೀವೂ ನಿಮ್ಮ ಅಮೂಲ್ಯ ಸಮಯವನ್ನು ಬದಿಗಿಟ್ಟು ನನ್ನ ಮಾತನ್ನು ಕೇಳಲು ಬಂದಿದ್ದೀರಿ. ಹಾಗಾಗಿ ನಿಮ್ಮ ಕಣ್ಣುಗಳು ಚುರುಕಾಗಿ ಓಡಾಡುತ್ತಿರುವಂತೆ, ನಿಮ್ಮ ಮೆದುಳಿನ ರಸಗ್ರಂಥಿಗಳೂ ಕುಣಿದಾಡಲಿ; ನಿಮ್ಮ ಗಮನವೆಲ್ಲ ಈ ಅಕ್ಷರಗಳ ಮೇಲೆ, ಅದು ಕೊಡುವ ಅರ್ಥ/ಅನರ್ಥ/ಅಪಾರ್ಥಗಳಲ್ಲಿ ನೆಲಸಿರಲಿ.

ನಾವು ಒಂದು ಮಹಾನ್ ದೇಶದ ಮಹಾನ್ ನಾಗರೀಕರು. ಹಾಗಾಗಿ ನಮಗೆ ನಮ್ಮ ದೇಶವನ್ನು ಮಹಾನ್ ದೇಶ ಎಂದು ಕರೆದುಕೊಳ್ಳುವ ಹಕ್ಕು ದಿಢೀರನೆ ಹುಟ್ಟಿ ಬಂದಿದ್ದು ಚೋದ್ಯದ ಸಂಗತಿಯೇ ಆಗಿದೆ. ಇಂತಹ ಹಕ್ಕನ್ನು ಈಗಷ್ಟೆ ದೊರಕಿಸಿಕೊಂಡ ಮೇಲೆ ಅದರ ಉಪಯೋಗ ಮಾಡಿಕೊಳ್ಳದೆ ಇರುವುದು ಒಂದು ಅಪರಾಧವಲ್ಲವೇ? ಹಾಗಾಗಿ ನಾವು, ಲಾರಿಗಳ ಹಿಂಭಾಗದಲ್ಲಿ, ಸಾರ್ವಜನಿಕ ಮೂತ್ರಿ/ಕಕ್ಕಸುಗಳ ಗೋಡೆಗಳ ಮೇಲೆ, ಸಾಮೂಹಿಕ ಕಸದ ತೊಟ್ಟಿಗಳ ಮೇಲೆ- ಹೀಗೆ ಎಲ್ಲಾ ಕಡೆ ವಿಜೃಂಭಿಸುವಂತೆ ಘೋಷಿಸಿದೆವು–ಮೇರಾ ಭಾರತ್ ಮಹಾನ್!

ಎಂತಹ ಮಹಾನ್ ದೇಶ ನಮ್ಮದು. ಎಣಿಸಿದಷ್ಟು, ನೆನಪಿಸಿಕೊಂಡಷ್ಟು ಎದೆ ಉಬ್ಬುತ್ತದೆ. ನಮ್ಮ ಸಂಸ್ಕೃತಿಯೇನು! ನಮ್ಮ ಇತಿಹಾಸವೇನು! ಆಹಾ! ಎಂತಹ ಮಹಾನ್ ವ್ಯಕ್ತಿಗಳು ನಮ್ಮ ದೇಶದಲ್ಲಿ ಹುಟ್ಟಿದರು, ಬೆಳೆದರು, ಇಂತಹ ವ್ಯಕ್ತಿಗಳ ವ್ಯಕ್ತಿತ್ವದಿಂದ ಹೊರಟ ಪ್ರಕಾಶದಿಂದ ಇಡೀ ಪ್ರಪಂಚದಲ್ಲಿಯೇ ಕಣ್ಣು ಕೋರೈಸುವಷ್ಟು ಬೆಳಗಾಯಿತು.

ಹೌದಲ್ಲವೇ?!

ಇದರಿಂದ ಪ್ರೋತ್ಸಾಹಿತರಾದ ನಮ್ಮ ಈಗಿನ ರಾಜಕಾರಣಿಗಳು ಈ ಮಹಾನ್ ದೇಶದಿಂದ ಪ್ರಪಂಚದಲ್ಲಿ ಬೆಳಕನ್ನು ಹರಡಲು ಹೊರದೇಶಕ್ಕೆ ಅದೆಷ್ಟೋ ಜನರನ್ನು ವಿಶ್ವಾಸದಿಂದ ಕಳಿಸಿಕೊಡಲು ಯೋಜಿಸಿದರು. ಪಾಪ, ಈ ಬೆಳಕು ನಮ್ಮ ದೇಶದಲ್ಲಿ ಇದ್ದರೆ ಮಾತ್ರ ಸಾಕೇ? ಅಮೆರಿಕಾ, ಬ್ರಿಟನ್‌ನಂತಹ ದೇಶಗಳು ಬದುಕಿಕೊಳ್ಳಬೇಡವೇ? ನಾವು ಬುದ್ಧಿವಂತ ಜನರನ್ನು ಆ ದೇಶಕ್ಕೆ ಕಳುಹಿಸದಿದ್ದರೆ ಹೇಗೆ? ಆ ದೇಶದಲ್ಲಿ ಬೆಳಕು ಮೂಡುವುದು ಹೇಗೆ?

ಹಾಗಾಗಿ ಈ ರಾಜಕಾರಣಿಗಳ ಯೋಜನೆಯನ್ನು ಯಶಸ್ವಿಗೊಳಿಸಲು ನಾವು ಬಹಳ ಹೆಣಗುತ್ತಿದ್ದೇವೆ. ಕೋಟ್ಯಾಂತರ ಖರ್ಚು ಮಾಡಿ ಹುಟ್ಟು ಹಾಕಿದ ಐ.ಐ.ಟಿ.ಯಂತಹ ಸಂಸ್ಥೆಗಳಲ್ಲಿ, ಲಕ್ಷಗಟ್ಟಲೆ ಖರ್ಚುಮಾಡಿ ತರಬೇತು ಮಾಡಿದ

ಬುದ್ಧಿವಂತ ವ್ಯಕ್ತಿಗಳನ್ನು ನಾವು ದಾನವಾಗಿ ಈ ದೇಶಗಳಿಗೆ ಕೊಡುತ್ತಿದ್ದೇವೆ. (ಇಂತಹ ವ್ಯಕ್ತಿಗಳಿಗೆ ಅಮೆರಿಕೆಯಲ್ಲಿ ತತ್‌ಕ್ಷಣದಲ್ಲಿ ಹಸಿರುಕಾರ್ಡ್ ಎಂಬ ದಿವ್ಯವಾದ ಒಂದು ಕಾರ್ಡ್ ಸಿಗುತ್ತದಂತೆ.)

ಒಂದು ವೇಳೆ ಈ ಪ್ರತಿಭಾವಂತರು ಮತ್ತೆ ಬಂದು ನೆಲಸುತ್ತೇವೆ ಎಂದು ಗಲಾಟೆ ಎಬ್ಬಿಸಬಹುದು ಎಂದು, ಮೀಸಲಾತಿಯಂತಹ ಭವ್ಯವಾದ ಕಲ್ಪನೆಗಳಿಂದ ಅವರನ್ನು ಅಲ್ಲೇ ನಿಲ್ಲುವಂತೆ ಮಾಡಬಲ್ಲ ಶಕ್ತಿ ನಮ್ಮ ರಾಜಕಾರಣಿಗಳಿಗೆ ಇದೆ! ಎಂತಹ ಧರ್ಮಬುದ್ಧಿ ನಮ್ಮ ರಾಜಕಾರಣಿಳದ್ದು, ನಮ್ಮ ಯೋಜನಾ ಜನರದ್ದು! ನಿಜವಾಗಲೂ ನಮ್ಮದು ಮಹಾನ್ ದೇಶ.

ಚಿಕ್ಕ ರಾಷ್ಟ್ರಗಳ ಬಗ್ಗೆಯೂ ನಮಗೆ ಕಾಳಜಿ ಇದೆ. ಕುವೈತ್, ದುಬೈ ಇಂತಹ ಅಂಗೈಯಗಲದ ರಾಷ್ಟ್ರಗಳು ಬದುಕಬೇಡವೆ? ಪಾಪ, ಅಲ್ಲಿಯ ಜನಕ್ಕೆ ಕೈ ಕೆಲಸ ಮಾಡಿಯೇ ಗೊತ್ತಿಲ್ಲ. ಅವರಿಗೆ ಯಾವಾಗಲೂ ಮನೆಯಲ್ಲಿ ಕೈಗೊಬ್ಬ ಆಳು, ಕಾಲಿಗೊಬ್ಬ ಆಳು ಇರಲೇಬೇಕು...ಆದರೇನಂತೆ....ನಾವಿಲ್ಲವೇ? ಅವರ ಸೇವೆ ಮಾಡಲು?...ನಾವು ಕಳಿಸುತ್ತೇವೆ. ಎಷ್ಟು ಜನ ಸೇವಕರನ್ನು ಬೇಕಾದರೂ ನಾವು ಕಳಿಸುತ್ತೇವೆ...ಛೆ,ಛೆ, ಡಾಲರ್ ವಿಷಯ ಯಾರು ಕೇಳಿದ್ದು...ನಮಗೆ ಅವರ ಸೇವೆ ಮುಖ್ಯ. ಡಾಲರ್ ಬರುತ್ತೆ ಹೋಗುತ್ತೆ. ಮೊನ್ನೆ ಕೊಲ್ಲಿ ಯುದ್ಧದಲ್ಲಿ ಎಷ್ಟು ಕಳಿದುಕೊಳ್ಳಲಿಲ್ಲ. ಬಿ.ಸಿ.ಸಿ.ಐ. ಬ್ಯಾಂಕ್ ದುರ್ವ್ಯವಹಾರದಲ್ಲಿ ಎಷ್ಟು ಕಳೆದುಕೊಳ್ಳಲಿಲ್ಲ. ಯಾರಾದರೂ ಯೋಚನೆ ಮಾಡಿಕೊಂಡೆವೆ?...ಮುಖ್ಯ ರಾಷ್ಟ್ರದಲ್ಲಿರುವ ಇಂತಹ ರಾಷ್ಟ್ರಗಳ ಪುನರ್ನಿರ್ಮಾಣ ಮಾಡುವುದಕ್ಕೆ ಅವಕಾಶ, ಅವರ ಸೇವೆ....

ಆಹಾ, ಎಂತಹ ಉದಾತ್ತ ಧ್ಯೇಯ! ಎಂತಹ ಮಹಾನ್ ದೇಶ ನಮ್ಮದು!

ದೇಶ ಸ್ವಾತಂತ್ರ್ಯವಾದಲಾಗಾಯ್ತು ಇಲ್ಲಿಯವರೆಗೆ ಪ್ರತಿ ವರ್ಷದ ಅಂದಾಜು ವೆಚ್ಚದ ಪಟ್ಟಿಯನ್ನು ಗಮನಿಸಿದ್ದೀರಾ? ಹೀಗೊಂದು ವೇಳೆ ಗಮನಿಸಿದ್ದರೆ ಈ ನಲವತ್ತೈದು ವರ್ಷದಲ್ಲಿ ನಮ್ಮ ಮಹಾನ್ ಭಾರತ ವರ್ಷದಲ್ಲಿ ಎಷ್ಟು ಸಂಪತ್ತನ್ನು ಕೇಂದ್ರ ಸರಕಾರ ತನ್ನ ಬೊಕ್ಕಸಕ್ಕೆ ಸೇರಿಸಿಕೊಂಡಿರಬಹುದೆಂದು ಅಂದಾಜು ಮಾಡಿದ್ದೀರಾ?... ಇಲ್ಲ ಅಲ್ಲವೇ? ಆ ಹಣದ ಮೊತ್ತ ಅಂದಾಜು ಇಪ್ಪತ್ತೈದು ದಶಲಕ್ಷ ಕೋಟಿ ರೂಪಾಯಿ! ಇನ್ನು ರಾಜ್ಯ ಸರಕಾರಗಳ ಬೊಕ್ಕಸಕ್ಕೆ ಸೇರಿಕೊಂಡಿರಹುದಾದ ಹಣದ ಅಂದಾಜನ್ನು ನೀವು ಮಾಡಬಹುದು.

ಇಷ್ಟು ಪ್ರಮಾಣದ ಹಣ ಎಲ್ಲಿ ಹೋಯಿತು? ಕೇಳಿದರೆ, ಬಡವರ ಕಣ್ಣೀರನ್ನು ಒರೆಸುವ ಪ್ರಯತ್ನ ನಡೆಯುತ್ತಿದೆ ಎಂಬ ಸ್ಟಾಂಡರ್ಡ್ ಉತ್ತರವನ್ನು ರಾಜಕಾರಣಿಗಳು ಹಾಗೂ ಯೋಜನಾ ಜನಕರ ರೂಪಾಂತರಗೊಂಡ ರಾಜಕಾರಣಿಗಳು ಹೇಳುತ್ತಾ ಬಂದಿದ್ದಾರೆ. ನಮ್ಮದು ಭವ್ಯವಾದ ಗುರಿ–ಸಮಾಜವಾದ! ಅದರ ಹೆಸರಿನಲ್ಲಿ ಅನೇಕ ಕ್ರಾಂತಿಕಾರಿ ಯೋಜನೆಗಳು ಪ್ರತಿವರ್ಷ (ಕೆಲವು ಬಾರಿ ಚುನಾವಣೆ ಘೋಷಣೆಯಾದಾಗ ಆರು ತಿಂಗಳಿಗೆ ಬೇಕಾದರೂ ಆಗಬಹುದು) ಘೋಷಿಸಲಾಗುತ್ತಿದೆ.– ನೆಹರೂ ಯೋಜನೆ,

ಇಂದಿರಾಗಾಂಧಿ ಯೋಜನೆ, ಸಂಜಯಗಾಂಧಿ ಯೋಜನೆ, ಈಗ ರಾಜೀವಗಾಂಧಿ ಯೋಜನೆ, (ಮುಂದಕ್ಕೆ ಸೋನಿಯಾಗಾಂಧಿ ಯೋಜನೆ ಇತ್ಯದಿ). ಯೋಜನೆಯ ಅಂತರ್ಗತವಾಗಿ ನಿಗದಿಯಾದ ಹಣ ಖರ್ಚಾಗುತ್ತದೆ. ಖರ್ಚು ಮಾಡುವವರು ಯಾರು ಎಂಬುದು ಅಂತಹ ರಹಸ್ಯವಾಗೇನೂ ಉಳಿದಿರುವುದಿಲ್ಲ. (ಎಲ್ಲಾ 'ಖುಲ್ಲಂ ಖುಲ್ಲ'). ಖರ್ಚು ಮಾಡುವವನಿಗೂ ಭಯವಿರುವುದಿಲ್ಲ (ಸರ್ಕಾರಕ್ಕೆ), ಖರ್ಚು ಮಾಡಲಾಗುತ್ತಿರುವಾಗ ನಡುವಿನಲ್ಲಿ ಕ್ರಿಯೆ–ಹಣ ಖರ್ಚು ಇದಕ್ಕೆ ಸಂಬಂಧ ಕಲ್ಪಿಸುವ ವ್ಯಕ್ತಿಗೂ ಭಯವಿರುವಿದಿಲ್ಲ (ದಳ್ಳಾಳಿ, ಕಂಟ್ರ್ಯಾಕ್ಟುದಾರ ಇತ್ಯಾದಿ). ಖರ್ಚಾದಾಗ ಅದು ತಲುಪಬೇಕಾದ ಜಾಗಕ್ಕೆ ಮಾತ್ರ (ಬಡವ) ತಲುಪಿರುವುದಿಲ್ಲ. ಬಡವ ಅದೇ ಗುಡಿಸಲಲ್ಲಿ ಕುಳಿತಿದ್ದಾನೆ; ಅವನದು ಅದೇ ಹರಕಲು ಚಾಪೆ, ಅದೇ ಊಟ–ಅವನ ಜೀವನಸ್ತರ ಮಾತ್ರ ಏರಲಿಲ್ಲ. ಅವನ ಕಣ್ಣೀರು ಒರೆಸುವ ಕೈ ಇನ್ನೂ ಬಂದಿಲ್ಲ ಎಂದರೆ ಆಶ್ಚರ್ಯವಲ್ಲವೇ?

ನಿಜವಾಗಿಯೂ ಆಶ್ಚರ್ಯವೇ. ಈ ಇಪ್ಪತ್ತೈದು ದಶಲಕ್ಷ ಕೋಟಿ ರೂಪಾಯಿ ಮತ್ತು ಇನ್ನಷ್ಟು ಕೋಟಿ ರೂಪಾಯಿಗಳನ್ನು ಖರ್ಚುಮಾಡಿಯೂ ಅವೇ ಕೆಟ್ಟ ರಸ್ತೆಗಳು, ಅದೇ ರೈಲ್ವೆ ವ್ಯವಸ್ಥೆ, ಅದೇ ಕೊಳಚೆ ಚರಂಡಿಗಳು, ಕಲುಷಿತ ವಾತಾವರಣ, ಧಾರಾವಿಯಂತಹ ಸ್ಲಮ್ಮುಗಳು ಕಾಣುತ್ತ ಇರಬೇಕಾದರೆ, ಇಷ್ಟು ಹಣವನ್ನು ಗುರುತು ಸಿಗದ ಹಾಗೆ ಮಂಗಮಾಯ ಮಾಡಬೇಕಾದರೆ ಎಷ್ಟು ಜನ ಇಂದ್ರಜಾಲ–ಮಹೇಂದ್ರಜಾಲ ವಿದ್ಯೆಯಲ್ಲಿ ಪರಿಣತರಾದವರು ಕೆಲಸದಲ್ಲಿ ನಿರತರಾಗಿರಬೇಕು! (ಇಂತಹವರಿಂದ ಪಿ.ಸಿ. ಸರ್ಕಾರ ಅನೇಕ ಟ್ರಿಕ್‌ಗಳನ್ನು ಕಲಿಯಬಹುದು) ಅಹಾ ಭಾರತ ಮಾತೆ, ನೀನೇ ಧನ್ಯೆ, ಪುಣ್ಯವಂತೆ, ಇಂತಹ ಪ್ರತಿಭಾವಂತರನ್ನು ಹೊತ್ತು ಹೆತ್ತಿರಬೇಕಾಗಿದ್ದರೆ ನಿನ್ನ ಒಡಲೆಷ್ಟು ಸಮೃದ್ಧವಾಗಿರಬೇಕು!

'ಅನೇಕತೆಯಲ್ಲಿ ಏಕತೆ' ಎಂಬ ಘೋಷಣೆ ಭಾರತೀಯರಿಗೆ ಬಹಳ ಪ್ರಿಯವಾದ ಘೋಷಣೆ. ಗಡ್ಡ, ನಾಮ, ಜುಟ್ಟು, ಹ್ಯಾಟು, ಟೋಪಿ, ಇವುಗಳನ್ನು ತೋರಿಸುತ್ತ ನಮ್ಮ ಸಂಸ್ಕೃತಿಯ ಬೆನ್ನನ್ನು ನಾವು ತಟ್ಟಿಕೊಳ್ಳುತ್ತೇವೆ.

ಈ ಘೋಷಣೆಯನ್ನು ಪ್ರತಿಯೊಬ್ಬರೂ ತಮ್ಮದೇ ರೀತಿಯಲ್ಲಿ ಅರ್ಥ ಮಾಡಿಕೊಂಡಿರುವಂತೆ ಕಾಣಿಸುತ್ತದೆ. ಹಾಗಾಗಿ ನಿಮಗೆ ಎಲ್ಲೆಲ್ಲೂ ಈ 'ಏಕತೆ'ಗಾಗಿ ಹೊಡೆದಾಟವಾಗುತ್ತಿರುವುದು ಕಾಣಿಸುತ್ತದೆ. ಗಡ್ಡದವನು ತನ್ನ ಏಕತೆಯಲ್ಲಿ ಮಿಕ್ಕವನ ಅನೇಕತೆಯನ್ನು ಸೇರಿಸಿಕೊಳ್ಳಲು, ಮಿಕ್ಕವರಿಗೂ ಗಡ್ಡವನ್ನು ಸಿಕ್ಕಿಸಲು ಪ್ರಯತ್ನಿಸುತ್ತಾನೆ. ಹಾಗೆ ನಾಮದವನು ಮಿಕ್ಕವರಿಗೆ ನಾಮ ಬಳಿಯಲು ಪ್ರಯತ್ನಿಸುತ್ತಾನೆ. ಜುಟ್ಟಿನವನು ಜುಟ್ಟು ಅಂಟಿಸಲು ಪ್ರಯತ್ನಿಸುತ್ತಾನೆ. ಟೋಪಿಯವನು ಟೋಪಿ ಹಾಕಲು ಪ್ರಯತ್ನಿಸುತ್ತಾನೆ.

ಈ ವಿಲಕ್ಷಣವಾದ ಅಂತರ್ಯುದ್ಧವನ್ನು ಭಾರತೀಯನೆನಿಸಿಕೊಳ್ಳುವ ವ್ಯಕ್ತಿ ನಿರಂತರವಾಗಿ ಮಾಡುತ್ತಿರುತ್ತಾನೆ. ಈ ಅಂತರ್ಯುದ್ಧದ ಫಲವನ್ನು ಈ ಗಡ್ಡ, ನಾಮ, ಜುಟ್ಟು, ಟೋಪಿ, ಇತ್ಯಾದಿ ಪಂಗಡದವರು ಮಾತ್ರವಲ್ಲ, ಅದಕ್ಕೆ

ಸಂಬಂಧಪಡದ ಮಿಕ್ಕವರೂ ಅನುಭವಿಸಬೇಕಾಗುತ್ತದೆ ಅನುಭವಕ್ಕೆ ಏನು ಹೆಸರು ಕೊಡುವುದು ಎಂಬುದರ ಬಗ್ಗೆ ಮಾತ್ರ ವಾದವಿವಾದಗಳು ಉಂಟಾಗಬಹುದು. ತತ್ವಶಾಸ್ತ್ರದಲ್ಲಿ ಯಾವಾಗಲೂ ಮುಂದಿರುವ ನಮ್ಮ ಜನ ಈ ಅನುಭವದ ಒಂದೆ ಸ್ಮಶಾನ ವೈರಾಗ್ಯ, ಅಭಾವ ವೈರಾಗ್ಯ ಇತ್ಯಾದಿ ವೈರಾಗ್ಯಗಳ ಸಂಕೇತಗಳನ್ನು ನೀಡಿ ಸಮಕಾಲೀನ ತತ್ವಶಾಸ್ತ್ರಕ್ಕೆ ಬೃಹತ್ ಕೊಡುಗೆ ಕೊಟ್ಟಿದ್ದಾರೆ. ಆಹಾ, ಎಂತಹ ಅಪೂರ್ವಮಿಲನ-ರಾಜಕಾರಣ ಹಾಗೂ ತತ್ವಶಾಸ್ತ್ರದ ಎಂತಹ ಅಪೂರ್ವ ಮಿಲನ! ಪ್ಲೇಟೋನ ವಿಮರ್ಶೆಗೆ ನಿಲುಕದ ಮಿಲನ!

ನಮ್ಮ ದೇಶ ಮಹಾನ್ ದೇಶ ಎಂದು ಹೇಳಲು ತಾವು ಹಿಂಜರಿದರೆ ಹೇಗೆ ಎಂದು ಪ್ರಸಾರ ಮಾಧ್ಯಮದವರು ಯೋಚಿಸಿದರು. ಹಾಗಾಗಿ ದೂರದರ್ಶನದವರು, ಆಕಾಶವಾಣಿಯವರು ದೇಶದ ಎಲ್ಲಾ ಕಲಾವಿದರನ್ನು ಕಲೆಹಾಕಿ, 'ನನ್ನ ದನಿಗೆ, ನಿನ್ನ ದನಿಯ ಸೇರಿದಂತೆ ನಮ್ಮ ಧ್ವನಿಯು' ಎಂದು ದಶದಿಕ್ಕುಗಳಲ್ಲಿ ಕೇಳಿಸುವಂತೆ ಕೂಗಿಸಿದ್ದಾಯಿತು....ನೋಡುವವರ ಮೇಲೆ, ಕೇಳುವವರ ಮೇಲೆ ಎಂತಹ ಮೋಡಿ!

ಸ್ನೇಹಿತರೇ, ನೋಡಿದಿರಾ ಈ ಪ್ರಸಾರ ಮಾಧ್ಯಮದವರು ಸಮಸ್ಯೆಯನ್ನು ಎಷ್ಟು ಸುಲಭ ಮಾಡಿದರು. ಅವರ ದೃಷ್ಟಿಯಲ್ಲಿ ಎಲ್ಲವೂ ಧ್ವನಿಗಳು. ಎಲ್ಲ ಧ್ವನಿಗಳು ಸುಲಭವಾಗಿ ಸೇರಿ ಹೋಗುತ್ತವೆ ಎಂಬುದು ಅವರ ವಾದ. ಕೆಲವು ಕಡೆ ಅಪಸ್ವರ ಬಂದರೂ ಅದೂ ಒಂದು ರಾಗ ಎಂದುಕೊಂಡುಬಿಡಬಹುದಲ್ಲ. ಕತ್ತು ಹಿಚುಕುತ್ತ ಇರುವಾಗ ಸ್ವರವೇ ಹೊರಡದೇ ಇದ್ದಾಗ? ಗಂಟಲು ಕಟ್ಟಿ ಸ್ವರವೇ ಹೊರಡದೇ ಹೋದಾಗ? ಬಂದೂಕನ್ನು ಗಂಟಲ ಬಳಿ ಗುರಿ ಇಟ್ಟಿರುವಾಗ ಸ್ವರ ಹೊರಡುತ್ತದೆಯೇ?

ಆದರೂ ನಾವು ಧೈರ್ಯವಾಗಿ ಹೇಳಬಹುದು- ಮೇರಾ ಭಾರತ್ ಮಹಾನ್. ಅದನ್ನು ಹೇಳುವ ಸ್ವಾತಂತ್ರ್ಯವಂತೂ ನಮಗಿದೆಯಲ್ಲ?!

---

## ಪ್ರಶ್ನೆಯೇ ಉತ್ತರ

ಹಣ್ಣಿಲ್ಲ
ಹೂವಿಲ್ಲ
ಎಲೆ ಇಲ್ಲ
ಎಂಥಾ ಮರ?
ಕ್ಯಾ
ಮರ!

**-ಎಚ್. ಡುಂಡಿರಾಜ್**

ಪುಸ್ತಕ ಪರಿಚಯ

# ಮಧುಚಂದ್ರ

ಪೀಪಿ

---




ಒಂದು ಹಾಸ್ಯ ಕೃತಿಯನ್ನು ಪರಿಚಯ ಮಾಡಿಕೊಡುವಾಗ/ ವಿಮರ್ಶಿಸುವಾಗ ಪರಿಚಯಕಾರನಿಗೆ/ ವಿಮರ್ಶಕನಿಗೆ ಎದುರಾಗುವ ಒಂದು ಸಮಸ್ಯೆ ಎಂದರೆ ತನ್ನ ಮಾತುಗಳು ಹಾಸ್ಯಭರಿತಬಾಗಿರಬೇಕೇ ಅಥವಾ ಗಂಭೀರವಾಗಿರಬೇಕೇ ಎಂಬುದು. ಸಾಮಾನ್ಯವಾಗಿ ನೋಡಿದರೆ ಇದೊಂದು ಸಮಸ್ಯೆಯೇ ಅಲ್ಲ. ಎಲ್ಲ ಪರಿಚಯಾತ್ಮಕ ಬರಹಗಳು/ ವಿಮರ್ಶೆಗಳೂ ಒಂದು ಮಟ್ಟದ ಗಾಂಭೀರ್ಯವನ್ನು ಪ್ರದರ್ಶಿಸಬೇಕೆಂಬ ಭಾವನೆಯೂ ಇದೆ. ಆದ್ದರಿಂದ ಮೂಲಕೃತಿ ಭಾವ, ಆಶಯ, ಆಕೃತಿ ಏನೇ ಇರಲಿ, ಅದನ್ನು ಕುರಿತಾದ ಮಾತುಗಳು ಗಂಭೀರವಾಗಿರಬೇಕೆಂದು ನಂಬಿರುವವರು ವಿರಳವೇನಲ್ಲ. ಅವರು ಹೇಳುವುದೂ ನ್ಯಾಯವೇ. ಕೆಲವೊಂದು ಹಾಸ್ಯ ಲೇಖನಗಳೂ ಸೀರಿಯಸ್ಸಾಗಿರುತ್ತವಲ್ಲ.

ಒಂದು ವಿಶಿಷ್ಟವಾದ perspective ಹಾಸ್ಯದ ತಿರುಳಾಗಿದ್ದರಿಂದ ಆ ವೈಶಿಷ್ಟ್ಯದ ರುಚಿ ತೋರಿಸದೆ ಅದು ಹಾಗಿದೆ, ಹೀಗಿದೆ, ಲೊಂಗು ಲೊಟ್ಟೆ ಎಂದು ವಿವರಣೆ ನೀಡುತ್ತಾ ಹೋದರೆ, ಸಿಹಿ ಹೇಗಿದೆ ಎಂದು ಪರಿಚಯ ಮಾಡಿಕೊಡುವ ಪ್ರಯತ್ನವಾಗುತ್ತದೆಯೇ ವಿನಃ ಅದರ ರುಚಿ ತೋರಿಸಿದಂತಾಗುವುದಿಲ್ಲ. ಹೈಡ್ರಾಲಿಕ್ ಯಂತ್ರವನ್ನು ಮೊದಲಬಾರಿಗೆ ನೋಡಿದ ಮಗು ರಾಣಿ ಅದು "ಯಾಕೆ?" ಎಂದು ಪ್ರಶ್ನಿಸುತ್ತಾಳೆ. ಮತ್ತೊಂದು ಯಂತ್ರವನ್ನು ಕಂಡು, "ಅದು ಜನತಾ ಪಾರ್ಟಿನಾ?" ಎಂದು ಕೇಳುತ್ತಾಳೆ. ಪೇಚಿನ ಪ್ರಶ್ನೆಗಳನ್ನು ಕೇಳಿ, ಪೇಚಿನ ಪ್ರಸಂಗಗಳನ್ನು ನಿರ್ಮಿಸಿ, ಇಲ್ಲದ ಅಜ್ಜ ಅಜ್ಜಿಯರನ್ನು reference ಕೊಟ್ಟು ಇರುವ ತಂದೆ ತಾಯಿಗಳನ್ನು ಕಕ್ಕಾವಿಕ್ಕಿಗೊಳಿಸುವುದರಲ್ಲಿ ಯಶಸ್ವಿಯಾಗುತ್ತಾಳೆ. ಓಗೊಡದ ಹೆಂಡತಿಗೆ ಕಿವುಡೇ ಎಂದು ಕಂಡುಕೊಳ್ಳಲು ನಡೆಸಲಾಗದ ಪ್ರಯೋಗದ ಪರಿಣಾಮ.....ಬೇಡ, ನೀವೇ 'ಮಧುಚಂದ್ರ' (ಲೇ: ಎಂ. ಶಿವಕುಮಾರ್, ಅಭಿರುಚಿ ಪ್ರಕಾಶನ, 'ವನಸುಮ', 3408, 4ನೇ ಬ್ಲಾಕ್, ಜಯನಗರ, ಬೆಂಗಳೂರು-560011; ಬೆಲೆ ರೂ20.00) ಓದಿ ಚಕಿತರಾಗಿ. ಅಲ್ಯೂಮಿನಿಯಂ ಮೇಲಿನ ಅಬ್ಕಾರಿ ಸುಂಕ ಇಳಿದಾಗ ಸರಕಾರಕ್ಕಾದ ನಷ್ಟವನ್ನು ಲೆಕ್ಕ ಹಾಕಿ

''ಮೂವತ್ತು ಮೂರು ಕೋಟಿ!'' ಎಂದು ಬೆಚ್ಚಿಬಿದ್ದ ಡಾ. ದ.ರಾ. ಬೇಂದ್ರೆ, ಕೇಂದ್ರ ಹಣಕಾಸು ಸಚಿವರಿಗೆ ''ನನ್ನ ಹರಣ ನಿನಗೆ ಶರಣ'' ಎಂದು ಕೈಚೆಲ್ಲಿದ್ದು ನಿಮಗೆ ಗೊತ್ತೆ? ರಷ್ಯದ ಧೀರೋದಾತ್ತ ಹುಸ್ಸಾರ್‌ನನ್ನು ಅತಿಥಿಯಾಗಿ ಸ್ವೀಕರಿಸಿ ಸತ್ಕರಿಸಿದ ಮೋಹಿನಿಯೊಬ್ಬಳು, ಅವನು ಹೊರಟು ನಿಂತಾಗ 'ಹಣ?' ಎಂದಳಂತೆ. 'ಛೇ! ರಷ್ಯದ ಹುಸ್ಸಾರ್ ಎಂದಿಗೂ ಹಣ ತೆಗೆದುಕೊಳ್ಳುವುದಿಲ್ಲ!' ಎಂದು ಪರಮ ಔದಾರ್ಯವನ್ನು ಮೆರೆದವನ ಬಗ್ಗೆ ಇರುವ ಜೋಕ್ ಕೇಳಿದ್ದೀರಾ? (The preceding sentence is a self-referential sentence). ಜೆನೆಟಿಕ್‌ನಂತಹ ಗುಹ್ಯ ವಿಷಯ ಹಾಸ್ಯಕ್ಕೇನಾದರೂ ಗ್ರಾಸ ಒದಗಿಸಬಹುದೆ? ಬಾಲ್ಯಕಾಲದ ನೆನಪುಗಳು ವಯಸ್ಸಾದ ನಂತರ tonic ಪರಿಣಾಮ ಬೀರುವ ಪರಿ ಹೇಗೆ?

''ನೀವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿರುತ್ತಿರೋವರೆಗೆ ಈ ಪವಿತ್ರ ಜಲ ವರ್ಣರಹಿತವಾಗಿರುತ್ತದೆ. ಯಾರಾದರೊಬ್ಬರು ಎಡವಿದರೆ ಇದು ಗಾಢವಾದ ನೀಲಿ ಬಣ್ಣಕ್ಕೆ ತಿರುಗುತ್ತದೆ'' ಎಂದು ಎಚ್ಚರಿಸಿ ಸ್ವಾಮಿಗಳು ಗಂಗಾಜಲದ ಬಾಟಲ್ ಅನ್ನು ಲವ್ ಮ್ಯಾರೇಜ್ ಮಾಡಿಕೊಂಡ ದಂಪತಿಗಳಿಗೆ ಅನುಗ್ರಹಿಸುತ್ತಾರೆ. ಹೆಂಡತಿ ತವರಿಗೆ ಹೋದಾಗ ಗಂಡನ ಕಿಡಿಗೇಡಿ ಗೆಳೆಯನೊಬ್ಬ ಅದಕ್ಕೆ ಇಂಕ್ ಬೆರಸಬೇಕೆ? ಹೋಗಲಿ, ಆ ಕಲುಷಿತ ನೀರನ್ನು ಚೆಲ್ಲಿ acqua pura ತುಂಬಿಡಬೇಕೆಂಬ ವ್ಯಾವಹಾರಿಕ ಅಗತ್ಯವನ್ನು ಮರೆತ ಆ ಗಂಡನನ್ನು ಏನೆನ್ನಬೇಕು? ಅಂದು ರಾತ್ರಿಯೇ ಹಿಂತಿರುಗಿದ ಹೆಂಡತಿ, ಗಂಡನಿಗೆ ತಿಳಿಯದಂತೆ ನೀಲವರ್ಣದ ಪವಿತ್ರ(?) ಜಲವನ್ನು ಚೆಲ್ಲಿ ವರ್ಣರಹಿತ ಗಂಗಾಜಲವನ್ನು ಬಾಟಲ್‌ಗೆ ತುಂಬಿ. ಆ ಬಗ್ಗೆ ಚಕಾರವೆತ್ತದೆ, ಗಂಡನನ್ನು ಮೂಕವಿಸ್ಮಿತನನ್ನಾಗಿ ಮಾಡುವುದರೊಟ್ಟಿಗೆ ಆಕಾಶವೇ ಅವನ ತಲೆಯ ಮೇಲೆ ಕುಸಿಯುವಂತೆ ಮಾಡುವುದು ನ್ಯಾಯವೇ? ನೀವು 'ಉಹುಂ! ನ್ಯಾಯವಲ್ಲ!'ಎಂದು ತವರಿನಲ್ಲಿ ಆ ಹೆಂಡತಿ ನಡೆಸಿರಬಹುದಾದ ಚೈನಿಯನ್ನು ಊಹಿಸಿಕೊಳ್ಳತೊಡಗಬಹುದು. ಆದರೆ, ಸ್ವಾಮಿ, ಈಗಿನ ಕಾಲದಲ್ಲಿ ನ್ಯಾಯ ಎಲ್ಲಿದೆ?

ಇಪ್ಪತ್ತೊಂದನೇ ಶತಮಾನದಲ್ಲೂ ಮಾನವ (homo-sapiens) ಮಸಾಲೆದೋಸೆಯ ಅಭಿರುಚಿಯನ್ನು ಉಳಿಸಿಕೊಂಡು ಬರುತ್ತಾನೆಂದರೆ, ನಮ್ಮ ಪಾಕ ಸಂಸ್ಕೃತಿಯ ಮಹತ್ವ ನಿಮಗೆ ಮನದಟ್ಟಾಗಬಹುದು. ಬಹುವಾಗಿ ಪೀಡಿಸುತ್ತಿರುವ ಆಧುನಿಕ ಯುಗದ ಅವ್ಯವಸ್ಥೆಗಳಿಗೆ ನಾವು ಹೇಗೆ ಸ್ಪಂದಿಸಿ ನಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಬಹುದು? ಪು. 51, 58, 97, 107ರಲ್ಲಿರುವ ಲೇಖನಗಳನ್ನು ದಯವಿಟ್ಟು ಗಮನವಿಟ್ಟು ಓದಿ. (Emphasis in mine).

ಶಿವಕುಮಾರ್ ಅವರಿಗೆ ವಿಜ್ಞಾನವೆಂದರೆ ಉತ್ಸಾಹ. ಸಾಪೇಕ್ಷವಾದವೇ ಇರಲಿ, ಕಂಪ್ಯೂಟರ್‌ಗಳೇ ಇರಲಿ, ಮಾರಕಾಸ್ತ್ರಗಳ ಟೆಕ್ನಾಲಜಿಯೇ ಇರಲಿ, ವಾತಭಾರವೇ ಇರಲಿ, ಭೂಗೋಳವೇ ಇರಲಿ, ಅಣುಬಾಂಬೇ ಇರಲಿ, ಬಾಹ್ಯಾಕಾಶ, ಕಾಲಮೀಮಾಂಸೆ, ಇಸ್ರೋಕ್ಷಿಪಣಿ–ಏನೇ ಇರಲಿ, ಹಾಸ್ಯದ black-holeನಲ್ಲಿ ಅನುಭವ ವೇದ್ಯವಾದ ಸಮೀಕರಣ ಸಿದ್ಧಾಂತಕ್ಕೆ ಒಳಗಾಗಿ

ನಮ್ಮನ್ನು ಜನಾಂಗೀಯವಾಗಿ ಪರಾಮರ್ಶಿಸಿ ಅಣಕಿಸುತ್ತದೆ. ನಮಗೆ ಕೋಪ ಬರುವುದಿಲ್ಲ. ನಗು– ತಿಳಿನಗು– ಬರುತ್ತದೆ.

ಮೂರನೆ ಭಾಗ ಅಣಕಕ್ಕೇ ಮೀಸಲು. ನಮ್ಮನ್ನು ಯಾರಾದರೂ ಅಣಕಿಸಿದರೆ, ಅವರ ಹಲ್ಲು ಮುರಿಯಬೇಕೆಂಬ ದಂತವಿಧ್ವಂಸಕಾಪ್ರಜ್ಞೆ ನಮ್ಮಲ್ಲಿ ಆವಿರ್ಭವಿಸುವುದು ನ್ಯಾಯ. (Where is nyaya, now a-days, again). ಆದರೆ ಶಿವಕುಮಾರ್ ದಂತಹಂತಕರಲ್ಲ. ಮುಗಳ್ನಕ್ಕು ದಂತ ಸೌಂದರ್ಯ ಪ್ರದರ್ಶನಕ್ಕೆ ಇಂಬುಗೊಡುವ ಪ್ರವೃತ್ತಿಯವರು. ಓಗ್ಡೆನ್ ನ್ಯಾಶ್, ಜಿ.ಪಿ. ರಾಜರತ್ನಂ, ಕುವೆಂಪು, ಕುಮಾರ ವ್ಯಾಸ, ಕೆ.ಎಸ್ನ., ಮುಂತಾದ ಹೆಸರಾಂತ ಕವಿಗಳ ಪ್ರತಿಧ್ವನಿ ಕೇಳಿಸಿ ನಮ್ಮನ್ನು ಮುದಗೊಳಿಸಿದ್ದಾರೆ. ತಾವೇ ಸ್ವತಃ ರಚಿಸಿದ ಹಾಸ್ಯ ಕವನಗಳನ್ನು 'ಮಧುಚಂದ್ರ'ದಲ್ಲಿ ಸೇರಿಸಿದ್ದಾರೆ. ಇದು ಸ್ಪೆಷಲೈಸೇಶನ್ ಯುಗ. ಕೆಲವರಿಗೆ ಸಾಹಿತ್ಯದಲ್ಲಿ, ಕೆಲವರಿಗೆ ಭೌತಶಾಸ್ತ್ರದಲ್ಲಿ, ಕೆಲವರಿಗೆ ರಸಾಯನಶಾಸ್ತ್ರದಲ್ಲಿ ಕೆಲವರಿಗೆ ಬಾಹ್ಯಾಕಾಶ ವಿಜ್ಞಾನದಲ್ಲಿ, ಕೆಲವರಿಗೆ ಸಮಾಜಶಾಸ್ತ್ರದಲ್ಲಿ, ಕೆಲವರಿಗೆ ಯಂತ್ರಶಾಸ್ತ್ರದಲ್ಲಿ ಮತ್ತೆ ಕೆಲವರಿಗೆ ಅರ್ಥಶಾಸ್ತ್ರದಲ್ಲಿ ಆಸಕ್ತಿ ಇರುವುದು ಸರಿ. ಈ ಎಲ್ಲರಿಗೂ ಅವರವರ ಕ್ಷೇತ್ರದಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸುವ ಹಾಸ್ಯ ಸರಸ್ವತಿಯನ್ನು ಸಾಕ್ಷಾತ್ಕರಿಸಿಕೊಂಡು ಬದುಕುವ ಮಾರ್ಗೋಪಾಯಗಳನ್ನು ಕರಗತಮಾಡಿಕೊಳ್ಳುವ ಕಲೆಯ ವಿಧಾನವನ್ನು ಶಿವಕುಮಾರ್ ಬಯಲು ಮಾಡಿದ್ದಾರೆ.

ಸುಪ್ರಸಿದ್ಧ ಜನಪ್ರಿಯ ವಿಜ್ಞಾನ ಲೇಖಕ ಐಸಾಕ್ ಅಸಿಮೋವ್ ಅಮೆರಿಕಾಕ್ಕೆ ವಲಸೆ ಹೋದ ಕುಟುಂಬಕ್ಕೆ ಸೇರಿದವನು. ಅವನ ತಾಯಿಗೆ ಅಲ್ಲಿನ ಇಂಗ್ಲಿಷ್ ಭಾಷೆ ಬರುತ್ತಿರಲಿಲ್ಲ. ಆಕೆ ಒಂದು ವಯಸ್ಕರ ಶಿಕ್ಷಣ ಶಾಲೆಗೆ ಸೇರಿ ಇಂಗ್ಲಿಷ್ ಕಲಿಯಲು ಪ್ರಾರಂಭಿಸಿದಳಂತೆ. ಪರಿಶ್ರಮದಿಂದ, ಶ್ರದ್ಧೆಯಿಂದ, ಸ್ವಾಭಾವಿಕ ಪ್ರತಿಭೆಯಿಂದ ಬಲುಬೇಗ ಆ ಭಾಷೆಯ ಮರ್ಮವನ್ನು ಆಕೆ ಗ್ರಹಿಸಿದ್ದನ್ನು ಕಂಡ ಆಕೆಯ ಶಿಕ್ಷಕ, ''ನೀವೇನಾದರೂ ಸುಪ್ರಸಿದ್ಧ ಜನಪ್ರಿಯ ವಿಜ್ಞಾನ ಲೇಖಕ ಐಸಾಕ್ ಅಸಿಮೋವ್ ಅವರ ಸಂಬಂಧಿಯೇ?'' ಎಂದು ಆಕೆಯನ್ನು ಕೇಳಿದನಂತೆ. ''ಆತ ನನ್ನ ಮಗ,'' ಎಂದು ಅವಳು ಉತ್ತರಿಸಿದಾಗ ತತ್ತರಿಸಿದ ಶಿಕ್ಷಕ, ''ಆಹಾ! ಅದಕ್ಕೇ ನಿಮ್ಮ ಬುದ್ಧಿ ಇಷ್ಟೊಂದು ಚುರುಕು!'' ಎಂದು ಉದ್ಗಾರವೆತ್ತಿದನಂತೆ. ಆಗ ಆ ತಾಯಿ '' ಅಲ್ಲ, ಅದಕ್ಕೇ ಅವನ ಬುದ್ಧಿ ಅಷ್ಟೊಂದು ಚುರುಕು!'' ಎಂದು ಶಿಕ್ಷಕನನ್ನು ತಿದ್ದಿದಳಂತೆ. ಕೊರವಂಜಿಯ ಪಿತ ಡಾ. ಶಿವರಾಂ ಎಂದು ತಿಳಿದವರಿಗೆ 'ಮಧುಚಂದ್ರ'ದ ಲೇಖಕ ಶಿವಕುಮಾರ್ ಅಪರಂಜಿಯ ಅಣ್ಣ ಎಂದು ತಿಳಿದಾಗ, ಐಸಾಕ್ ಅಸಿಮೋವನ ತಾಯಿಯ ಉದ್ಗಾರದ ಜೆನೆಟಿಕ್ ಮೌಲ್ಯ ಅರ್ಥವಾಗುತ್ತದೆ.

ಶುಭಾಶಯಗಳೊಂದಿಗೆ

# ಸೀಲಿನ್ ಇಂಡಸ್ಟ್ರೀಸ್

**C - 347, ಮೊದಲನೆಯ ಹಂತ**

**ಪೀಣ್ಯ ಕೈಗಾರಿಕಾ ಕ್ಷೇತ್ರ**

**ಬೆಂಗಳೂರು 560 058**

**ದೂರವಾಣಿ: 394571**

REGISTERED No. BGW - 180



Printed by V.R NATH for the Publisher M. SHIVAKUMAR, Published and owned by M SHIVA KUMAR, 36, 6th Main Road, Malleswaram, Bangalore - 560 003 Printed at IMPRESSIONS, 404, Sampige Road, Malleswaram, Bangalore - 560 003 Editor M. SHIVA KUMAR